# ಕುಣಿಗಲರಾಮಶಾಸ್ತ್ರಿಗಳ

## ಚರಿತ್ರೆ.



ಮುಮ್ಮಡಿಶ್ರೀಕೃಷ್ಣರಾಜ ಒಡೆಯರವರ

ಆಸ್ಥಾನ.

# ಪೀಠಿಕೆ.

ಆರಂಭದಲ್ಲಿ ಗಣಪತಿಗೂ ಸರಸ್ವತಿಗೂ ನಮಿಸುವೆನು. ಅನಂತರ ಶ್ರೀ ಶೃಂಗೇರಿ ಜಗದ್ಗುರು ಪಾದಾರವಿಂದಕ್ಕೆ ಸಾಷ್ಟಾಂಗವೆರಗುವೆನು.

ಪೂರ್ವದಲ್ಲಿ ಅನೇಕಜನ ಪ್ರತಿಭಾವಿಶಿಷ್ಟರಾದ ಪುರುಷಶ್ರೇಷ್ಠರಿದ್ದರು ಅವರುಗಳು ಅನೇಕ ಮಹಾಕಾರ್ಯಗಳನ್ನು ನಿರ್ವಹಿಸಿದರು ಅದರ ಫಲವನ್ನು ನಾವು ಈಗ ಅನುಭವಿಸುತ್ತೇವೆ ಅದು ಯಾರಿಂದ ನಮಗೆ ಪ್ರಾಪ್ತವಾಯಿತು, ಅಂಥವರು ಯಾವ ವಿಧದಲ್ಲಿ ಬಾಳಿಬದುಕಿದರು ಎಂಬುವುದನ್ನು ನಾವು ತಿಳಿದುಕೊಂಡರೆ, ಅವರ ನಡತೆಯನ್ನು ನಾವು ಕಲಿತುಕೊಳ್ಳಬಹುದು. ಆದ್ದರಿಂದ ಅವರ ಚರಿತ್ರೆಯು ಜನರಿಗೆ ಉಪಯುಕ್ತವಾಗಿರುವುದು. ಈಬಗೆ ಪುರುಷಶ್ರೇಷ್ಠರ ಚರಿತ್ರೆಯು ನಮ್ಮ ದೇಶಭಾಷೆಗಳಲ್ಲಿ ಹಬ್ಬಾಗಿಲ್ಲ.

ಕುಣಿಗಲು ರಾಮಶಾಸ್ತ್ರಿಗಳು ವಿಶೇಷವಾದ ಪ್ರತಿಭೆಯುಳ್ಳ ಮಹಾಪಂಡಿತರು. ಇವರಿಂದ ಈಚೆಗೆ ಇಂಥವರು ಯಾರೂ ಹುಟ್ಟಲಿಲ್ಲ. ಈ ದೇಶದ ಜನರ ನಡತೆಯಲ್ಲಿ **ಹಳೇರೀತಿ ಹೋಗಿ ಹೊಸರೀತಿ ಹರಡುತ್ತಾಇದೆಯಷ್ಟೆ.**

ಇಂಥಾ ಹಳೇ ಆಚಾರವು ಕೊನೆಗಾಣುವಕಾಲದಲ್ಲಿ ರಾಮ ಶಾಸ್ತ್ರಿಗಳು ಇದ್ದರು. ಇವರ ಚರಿತ್ರೆಯಿಂದ ಅವರಕಾಲದ ಸ್ಥಿತಿಗೂ ಈಗಿನ ಸ್ಥಿತಿಗೂ ತಾರತಮ್ಯವನ್ನು ತಿಳಿಯ ಬಹುದು.

ಆದರೆ ಎಲ್ಲಾಭಾಗದಲ್ಲಿಯೂ ಇವರಿಗೆ ಇದ್ದ ಅಸ್ಸಾ ದೃಶವಾದ ಯೋಗ್ಯತೆಯನ್ನು ವಿವರಿಸಲು ತಕ್ಕ ಸಹಾಯ ಗಳು ಇಲ್ಲ. ಇವರು ವೈದಿಕರು, ದಿನಚರಿ ನಡೆದ ಸಂ ಗತಿಗೆ ಡೈರಿ ಮುಂತಾದ್ದನ್ನು ಇಟ್ಟವರಲ್ಲ. ಆದಕಾರಣ ಈ ಶಾಸ್ತ್ರಿಗಳನ್ನು ಕುರಿತು ಇವರ ಅನೇಕಜನ ಶಿಷ್ಯ ರಿಂದ ಸಂಗತಿಗಳನ್ನು ಶೇಖರವಾಡಿ, ಒಬ್ಬರು ಹೇಳಿದ್ದ ನ್ನು ಇನ್ನೊಬ್ಬರಿಂದ ದೃಢಪಡಿಸಿಕೊಂಡೆ. ಸೂಕ್ಷ್ಮವಾಗಿ ಟಿಪ್ಪಣಿ ಮಾಡಿಕೊಂಡೆ. ಈ ಕೆಲಸಕ್ಕೆ ಆರಂಭಿಸಿ ೧೬ ವರುಷವಾಯಿತು.

ಕುಣಿಗಲ ರಾಮಶಾಸ್ತ್ರಿಗಳು ಮೈಸೂರ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರ್ ಪ್ರಭುಗಳ ಆಸ್ಥಾನದಲ್ಲಿ ಮುಖ್ಯ ವಿದ್ವಾಂಸರಾಗಿದ್ದ ಕಾರಣ, ಈ ಚರಿತ್ರೆಗೆ ಪ್ರತ್ಯ ಕ್ಷವಾಗಿ ಅಥವಾ ಪರೋಕ್ಷವಾಗಿ ಸಂಬಂಧಿಸಿದ ದರಬಾ ರಿನ ರೀತಿ, ರಾಜಸಭೆಯ ಸ್ಥಿತಿ, ಆಗಿದ್ದ ಮುಖಂಡರಾದ ವೈದಿಕ ಲೌಕಿಕರ ಯೋಗ್ಯತೆ ಮತ್ತು ಸದ್ಗುಣಗಳು, ಆ ಗಿನ ಗ್ರಂಥ ವ್ಯಾಸಂಗ ಕ್ರಮ, ಸಮಕಾಲಿಕರಾದ ಪಂಡಿ ತರ ಯೋಗ್ಯತೆ, ಇವೆಲ್ಲಕ್ಕೂ ಮುಖ್ಯ ಆಧಾರಭೂತರಾಗಿದ್ದ

ಕೃಷ್ಣರಾಜಪ್ರಭುಗಳ ಅಮೋಘವಾದ ಗುಣಾತಿಶಯಗಳು, ಇವೇ ಮೊದಲಾದ ವಿಷಯಗಳನ್ನು ಸಂಗತವಾದಕಡೆ ವರ್ಣಿಸಿದೆ. ವಿಕ್ರಮಭೋಜಾದಿಗಳನ್ನೂ ಪೇಶ್ವೆ ಶ್ರೀಮಂತರನ್ನೂ ಮರೆಯಿಸುತ್ತಾರೋ ಎನ್ನುವಹಾಗೆ ಪಂಡಿತರಿಗೋಸ್ಕರವೇ ಬದುಕಿದ ಆ ರಾಜಋಷಿಯ ಚರಿತ್ರೆಯನ್ನು ಶುದ್ಧವಾಗಿ ಬಿಟ್ಟು ಈ ಪಂಡಿತರ ಕಥೆಯನ್ನು ಹೇಳುವುದಾದರೆ, ಅದರಲ್ಲಿ ಸ್ವಾರಸ್ಯವಿರಲಾರದು. ಆದ್ದರಿಂದ ಆ ಸ್ಥಾನದ ಸಂಗತಿಗಳನ್ನು ಸಂಕ್ಷೇಪವಾಗಿಯಾದರೂ ಬರೆಯಬೇಕಾಗಿಬಂತು. ಇದು ಅಸಂಬಂಧ ವಿಷಯವಲ್ಲ. ಮತ್ತು ರಾಮಶಾಸ್ತ್ರಿಗಳು ಶುದ್ಧವಾಗಿ ಅದ್ವೈತಿಗಳು; ಇವರು ದ್ವೈತ ವಿಶಿಷ್ಟಾದ್ವೈತ ಸಿದ್ಧಾಂತಗಳ ಖಂಡನರೂಪವಾದ ಪ್ರಸಂಗಗಳನ್ನೂ ವಾಕ್ಯಾರ್ಥಗಳನ್ನೂ ಅನೇಕವೇಳೆ ಮಾಡಿದರು. ಆ ಸಂಗತಿಗಳ ಕುರಿತು ಬರೆದಿರುವುದರಲ್ಲಿ ನಾನು ವೈಷ್ಣವ ರಾಮಾನುಜ ಮತಸ್ಥರನ್ನು ತಿರಸ್ಕಾರ ಮಾಡಿದೇನೆಂದು ತಿಳಿಯಕೂಡದು. ಪದಸರಣಿಯಲ್ಲಿ ಸ್ಖಾಲಿತ್ಯವೇನಾದರೂ ಇದ್ದರೆ, ಅದಕ್ಕಾಗಿ ನನನ್ನು ಕ್ಷಮಿಸಬೇಕು.

ಇದೂ ಅಲ್ಲದೆ ದೇಶಭಾಷೆಯ ಗ್ರಂಥದಲ್ಲಿ ಸಂಸ್ಕೃತ ವಿದ್ವಾಂಸರನೇಕರಿಗೆ ಪಠ್ಯಾದವಿಷಯವೇನೂ ಸಿಕ್ಕುವದಿಲ್ಲವಾದಕಾರಣ, ಅದರಲ್ಲಿ ಅವರಿಗೆ ತಾತ್ಸಾರವುಂಟು. ಇಂಗ್ಲಿಷ್ ವಿದ್ವಾಂಸರನೇಕರಿಗೆ ಆಲೋಡನೆ ಕಡಮೆಯಾದ ದೇಶಭಾ

ಷೆಯಲ್ಲಿ ಉಪೇಕ್ಷೆ ಮೊದಲೇ ಹುಟ್ಟಿದೆ. ಇದರಿಂದ ದೇಶಭಾಷೆಯಲ್ಲಿ ಬರೆದ ಗ್ರಂಥಗಳನ್ನು ಓದತಕ್ಕವರು ಕಡಮೆ. ಹೀಗಿರುವಲ್ಲಿ ನ್ಯಾಯವೇದಾಂತ ಶಾಸ್ತ್ರಗಳಲ್ಲಿ ಮಹಾಪಂಡಿತರಾಗಿ ಗ್ರಂಥಗಳನ್ನು ಬರೆದಿರುವ ಶಾಸ್ತ್ರಿಗಳ ಪ್ರತಿಭೆಯು ತಿಳಿಯಲು ಅಂಥ ಗ್ರಂಥಗಳ ವಿಚಾರ ಅಗತ್ಯ; ಆ ವಿಷಯವನ್ನು ಬರೆಯಲುಹೋದರೆ ಈ ಚರಿತ್ರೆಯು ಬಹು ಕ್ಲಿಷ್ಟವಾಗಿ ವಾಚಕರ ಸಂಖ್ಯೆಯೇ ಕಡಮೆಯಾಗುವುದು. ಅದನ್ನು ಬಿಟ್ಟುಬರೆದರೆ ಆ ಮಹಾವಿದ್ವಾಂಸರ ಯೋಗ್ಯತೆಯೇ ಗೊತ್ತಾಗುವುದಿಲ್ಲ. ಇದನ್ನು ಬರೆಯುವುದರಲ್ಲಿ ಈ ಬಗೆಬಗೆ ಕಷ್ಟದಿಂದ ಬಹುವಾಗಿ ಪೇಚಾಟವಾಯಿತು. ಆದರೂ ಹಿಡಿದ ಕಾರ್ಯವನ್ನು ಹಾಗೂ ಹೀಗೂ ಸಾಗಿಸಿದೆ. ಗುಣದೋಷ ವಿಚಾರಪರರಾದ ಪುಣ್ಯಾತ್ಮರು ಅಸಂಸ್ಕಾರಿಯಾದ ನನ್ನ ನ್ಯೂನವಾದ ಯೋಗ್ಯತೆಯಮೇಲೆ ದೃಷ್ಟಿ ಇಡದೆ, ದೊಡ್ಡವರ ಚರಿತ್ರೆಯನ್ನು ತಿಳಿಸುವುದರಲ್ಲಿ ನನಗಿದ್ದ ಕುತೂಹಲದಮೇಲೆ ದೃಷ್ಟಿಇಟ್ಟು ಕ್ಷಮಿಸಬೇಕು. ಶಾಸ್ತ್ರಿಗಳಿಗೆ ಶಿಷ್ಯರಾಗಿದ್ದು ಸಂಗತಿಗಳನ್ನು ಚೆನ್ನಾಗಿ ಬಲ್ಲಂಥಾ ದೊಡ್ಡಬಳ್ಳಾಪುರದ ವಾಸುದೇವಶಾಸ್ತ್ರಿಗಳು, ಸಾಗ್ಗರೆ ನಾರಾಯಣಶಾಸ್ತ್ರಿಗಳು, ಸುಬ್ರಹ್ಮಣ್ಯಶಾಸ್ತ್ರಿಗಳು, ಸೊಂಡೇಕೊಪ್ಪದ ಗಂಗಾಧರಶಾಸ್ತ್ರಿಗಳು, ಧಾರವಾಡದ ಶ್ರೀನಿವಾಸಾಚಾರ್ಯರು, ಧರ್ಮಾಧಿಕಾರಿ ಕಾಶಿ ರಾಮಶಾಸ್ತ್ರಿಗಳು, ಇವರೇ ಮೊದಲಾದ ಪಂಡಿತರು ನನಗೆ ಈ ಚರಿತ್ರೆಯಲ್ಲಿ ಅನೇಕ

ಅಂಶಗಳನ್ನು ತಿಳಿಸಿಕೊಟ್ಟದ್ದಕ್ಕಾಗಿ ನಾನು ಕೃತಜ್ಞನಾಗಿ ದೇನೆ. ದೊಡ್ಡಬೆಲೆ ನಾರಾಯಣಶಾಸ್ತ್ರಿಗಳು ಸಂಸ್ಕೃತ ಗ್ರಂಥಗಳಿಂದ ಈ ಚರಿತ್ರೆ ಬರೆಯಲು ನನಗೆ ತಿಳಿಯಬೇ ಕಾದ ಅಂಶಗಳನ್ನು ತಿಳಿಸಿಕೊಟ್ಟ ಉಪಕಾರವನ್ನು ಮರೆ ಯಲಾರೆ. ಶ್ರೀ ಶೃಂಗೇರಿ ಶ್ರೀಮಠದ ಸರ್ವಾಧಿಕಾರಿ ಶ್ರೀ ಕಂಠಶಾಸ್ತ್ರಿಗಳ ಮತ್ತು ಧರ್ಮಾಧಿಕಾರಿ ರಾಮಶಾಸ್ತ್ರಿಗಳ ವಿಶೇಷವಾದ ಸಹಾಯವೂ, ಬಿ. ಸಿ. ಕೃಷ್ಣಶಾಸ್ತ್ರಿಗಳ ಅ ತ್ಯಂತವಾದ ಸಹಾಯವೂ ಯಾವಾಗಲೂನಾನು ಜ್ಞಾಪಕ ದಲ್ಲಿಡತಕ್ಕದ್ದಾಗಿವೆ. ಆದರೆ ಇವೆಲ್ಲವನ್ನೂ ತೂಗಿ ಹತ್ತ ರಿಂದ ಗುಣಿಸಿದರೆ ಎಷ್ಟಾಗುವುದೋ ಅದಕ್ಕೆಹತ್ತರಷ್ಟು ಉತ್ತಮವಾದ ಆ ಪರಮಹಂಸ ಪರಿವ್ರಾಜಕಾಚಾರ್ಯರಾದ ಶ್ರೀ ಶೃಂಗೇರಿ ಜಗದ್ಗುರುಗಳ ಚರಣಾನುಗ್ರಹವು ನನಗೆ ದೊರೆತದ್ದಕ್ಕಾಗಿ ತ್ರಿಸಂಧ್ಯಾಕಾಲಗಳಲ್ಲಿಯೂ ಆ ಪಾದಸ ರೋಜಗಳಿಗೆ ನಮಸ್ಕರಿಸುತಾ ಇರುತೇನೆ.

ಮೈ. ಸೂ. ಪು.

ಬೆಂಗಳೂರು,

ಸೌಮ್ಯ ಸಂ|| ಉತ್ತರಾಯಣ

ಪುಣ್ಯಕಾಲ ಪುಷ್ಯ ಶು|| ೩ ಶುಕ್ರವಾರ,

ಶಕ ೧೮೩೨.

# ವಿ ಷ ಯ ಸೂ ಚಿ ಕೆ .

ಶ್ರೀಃ.

ಶುಭಮಸ್ತು.

ಶ್ರೀ ಲಕ್ಷ್ಮೀನರಸಿಂಹ ಪ್ರಸೀದ

# ಕುಣಿಗಲ ರಾಮಶಾಸ್ತ್ರಿಗಳ

## ಚರಿತ್ರೆ.

### ೧ನೇ ಅಧ್ಯಾಯ.

ಅವತರಣಿಕೆ.

ಆಕಾಶದಲ್ಲಿ ನಕ್ಷತ್ರಗಳಿವೆ. ಬಹಳವಾಗಿ ಪ್ರಕಾಶಿಸುತ್ತಿವೆ. ಅವುಗಳನ್ನು ಎಲ್ಲರೂ ನೋಡಿದ್ದಾರೆ. ಇವು ಸ್ವಲ್ಪ ಪಕ್ಷ್ಕಪಾತವಿಯಾಗಿ ಆಕಾಶದ ಎಲ್ಲಾ ಭಾಗದಲ್ಲಿಯೂ ಕಾಣಿಸುವವು. ಆದರೆ ಈ ಭರತಖಂಡವೇ ಮೊದಲಾದ ಉಷ್ಣಪ್ರದೇಶಗಳಲ್ಲಿ ಕಾಣುವಷ್ಟು ನಕ್ಷತ್ರಗಳು ಶೀತಪ್ರದೇಶವಾದ ಯೂರೋಪ್ ದೇಶಗಳಲ್ಲಿ ಕಾಣುವುದಿಲ್ಲ. ಹೀಗೆ ಕಾಣುವ ನಕ್ಷತ್ರಗಳನ್ನೂ ಕಾಣದೇ ಇರುವ ನಕ್ಷತ್ರಗಳನ್ನೂ ನಾಳಿಕಾಯಂತ್ರವೇ ಮೊದಲಾದ ಉಪಾಯಗಳ ದೆಸೆಯಿಂದ ಯೂರೋಪಿನ ಜನರಾದ ಪಾಶ್ಚಾತ್ಯರು ಚೆನ್ನಾಗಿ ನೋಡಿ ಪರಿಶೋಧಿಸಿ, ಅವುಗಳ ಸ್ವರೂಪ, ಅವುಗಳಲ್ಲಿರುವ

ಪದಾರ್ಥಗಳು, ಆ ಪದಾರ್ಥಗಳ ಗುಣ, ಈ ಭೂಮಿಗೂ ಅವುಗಳಿಗೂ ಇರುವ ದೂರ, ಅವುಗಳಿಗೆ ಪ್ರಕಾಶ ಉಂಟಾಗುವುದಕ್ಕೆ ಕಾರಣ, ಆ ಪ್ರಕಾಶದ ಕಿರಣಗಳು ಈ ಭೂಮಿಗೆ ಬಂದು ಮುಟ್ಟುವುದಕ್ಕೆ ಬೇಕಾದ ಸಾವಿರಾರು ವರುಷಗಳ ಕಾಲ, ಇವೇ ಮೊದಲಾದ ಅನೇಕ ವಿಷಯುಗಳನ್ನು ತಿಳಿದು ನಿಷ್ಕರ್ಷೆಮಾಡಿದಾರೆ. ಆದರೆ ಇತರ ಕಡೆ ಕಾಣಿಸದೇ ಇರುವ ನಕ್ಷತ್ರಗಳು ಈ ಹಿಂದುಸ್ಥಾನದಲ್ಲಿ ಅನೇಕವಾಗಿ ಕಾಣಿಸಿದಾಗ್ಯೂ, ಅವುಗಳ ಸ್ವರೂಪವು ಇಂಥಾದ್ದೆಂದು ತಕ್ಕಮಟ್ಟಿಗೆ ತಿಳಿದವರು ಇಲ್ಲಿ ಬಹಳ ಕಡಮೆ. ನಕ್ಷತ್ರಗಳು ಎಂದರೇನು? ಎಂಬದಾಗಿ ಕೇಳಿದರೆ, ರಾತ್ರೆ ಹೊತ್ತು ಆಕಾಶದಲ್ಲಿ ಮಿಣಗುಟ್ಟುವ ಬೆಳಕು ಎಂದು ಹೇಳುವುದೇ ಕಷ್ಟವಾಗಿದೆ.

ಹೀಗೆಯೇ ಜನಸಮುದಾಯವೆಂಬ ಮಹಾಕಾಶದಲ್ಲಿಯೂ ನಮ್ಮ ದೇಶೀಯರ ಮೌಢ್ಯವೂ ಪಶ್ಚಿಮದೇಶೀಯರ ಪ್ರಾಜ್ಞತೆಯೂ ವಿಶೇಷವಾಗಿ ಕಾಣಬಂದಿವೆ. ಬುದ್ಧಿಯಲ್ಲಿ ಬೃಹಸ್ಪತಿಗೂ ವಿದ್ಯದಲ್ಲಿ ಸರಸ್ವತಿಗೂ ಸಮಾನರಾದ ಮಹಾಪಂಡಿತರನ್ನು ಮೊದಲ್ಗೊಂಡು, ನಾಲ್ಕು ಮೂರು ಸೇರಿದರೆ ಏಳಾಯಿತು ಎನ್ನುವ ಸಾಧಾರಣ ಬುದ್ಧಿಶಾಲಿಗಳ ವರೆಗೂ, ಅವರವರ ಯೋಗ್ಯತೆಗಳನ್ನು ನಿಷ್ಕೈಸಿ, ಅಂಥಾ

ಯೋಗ್ಯತೆ ಹುಟ್ಟಿ ಬೆಳೆದದ್ದು ಹೇಗೋ, ಅದರಿಂದ ಲೋಕಕ್ಕೆ ಯಾವ ಉಪಕಾರವಾಯಿತೋ, ಅದನ್ನು ವಿಂಗಡಿಸಿ, ಅದೆಲ್ಲವನ್ನೂ ಪಾಶ್ಚಾತ್ಯರು ವಿಶದವಾಗಿ ತೋರಿಸಿದಾರೆ. ಭಾವಚಿತ್ರಗಳನ್ನು ಇಡಕೂಡದು, ಆತ್ಮಪ್ರಶಂಸೆ ಮಾಡಕೂಡದು, ಪರಪ್ರಶಂಸೆ ಕೂಡಲೇ ಕೂಡದು, ಈ ಜನ್ಮ ಉದ್ಧಾರಣವಾಗುವುದಕ್ಕೆ ತಕ್ಕ ಮಾರ್ಗವನ್ನು ಹುಡುಕಿಕೊಳ್ಳಬೇಕು, ಎಂದು ವೈರಾಗ್ಯದಲ್ಲಿಯೇ ದೃಷ್ಟಿಯಿಟ್ಟಿದ್ದ ನಮ್ಮವರಿಗೆ, ಪಾಣಿನಿ, ಆರ್ಯಭಟ, ಶಂಕರಾಚಾರ್ಯರು, ಕಾಳಿದಾಸ, ವಿದ್ಯಾರಣ್ಯರು, ಇವರೇ ಮೊದಲಾದ ಮಹಾ ಪುರುಷರ ಬುದ್ಧಿಯಿಂದಲೂ ಪಾಂಡಿತ್ಯದಿಂದಲೂ ಲೋಕಕ್ಕೆ ಉಂಟಾದ ಉಪಕಾರವನ್ನು ಜನರು ತಿಳಿದು ಆ ಪುಣ್ಯಾತ್ಮರ ಸಚ್ಚರಿತ್ರೆ ಎಂಬ ಕನ್ನಡಿಯನ್ನು ನೋಡಿ ತಮ್ಮ ನಡತೆ ಎಂಬ ಮುಖವನ್ನು ತಿದ್ದಿಕೊಂಡರೆ, ಜ್ಞಾನಾಭಿವೃದ್ಧಿ ಮತ್ತೂ ಹೆಚ್ಚಾಗುವುದೆಂಬ ಯೋಚನೆ ಅನೇಕರಿಗೆ ತೋರಲೇ ಇಲ್ಲ. ಈ ಭಾಗದಲ್ಲಿ ನಮ್ಮ ದೇಶಸ್ಥರಿಗೆ ಹುಟ್ಟಿದ ತಾತ್ಸಾರದಿಂದ, ನಮ್ಮ ಹಿಂದುಸ್ಥಾನದಲ್ಲಿದ್ದ ಅನೇಕ ಮಹಾ ಪುರುಷರೆಲ್ಲರೂ, ಅಜ್ಞರಿಗೂ ಅನ್ಯದೇಶೀಯರಿಗೂ, ಹುಟ್ಟದೇ ಇದ್ದ ಹಾಗೆಯೇ ಆಯಿತು. ಅನ್ಯದೇಶದ ಲೇಖಣಿ ಆಯುಗಾರರೆಲ್ಲರೂ, ಗಡ್ಡದಮೇಲೆ ನಾವು ಬೆರಳಿಟ್ಟುಕೊಂಡು, "ಅಪ್ಪಾ, ಎಂಥಾ

ದೊಡ್ಡ ಪಂಡಿತರು?" ಎಂದು ಬೆರಗಾಗುವಮಟ್ಟಿನ, ಅದ್ವಿತೀಯವಾದ ಯೋಗ್ಯತೆಯನ್ನುಳ್ಳವರೆನ್ನಿಸಿಕೊಳ್ಳುತ್ತಾ ಬಂದರು. ಆದ್ದರಿಂದ ಯಾರ ಚರಿತ್ರೆ ಬರೆಯಲು ಅಸಾಧ್ಯವಾಗಿಹೋಯಿತೋ ಅಂಥಾ ಪುರುಷಶ್ರೇಷ್ಠರ ಸಂಗತಿ ಹೋಗಲಿಕ್ಕಾಗಿ, ಯಾರ ಚರಿತ್ರೆಯನ್ನು ಸಾಧ್ಯವಾದಮಟ್ಟಿಗೆ ತಿಳಿಯಬಹುದೋ ಅಂಥವರ ವಿಷಯವಾಗಿ ಇತಿಹಾಸವನ್ನು ಬರೆಯುವುದು, ಪ್ರಾಚೀನ ನವೀನ ವಿದ್ಯಾವೈಖರಿಯ ಮಾರ್ಗವನ್ನು ಅರಿತವರ ಯೋಚನೆಗೆ, ಉತ್ತಮವೆಂದು ತೋರಬಹುದು.

ಮೈಸೂರಿಗೆ ಪಶ್ಚಿಮವಾಗಿ ೧೦ ಹರಿದಾರಿ ದೂರದಲ್ಲಿ ಎಡತೊರೆ ಎಂಬ ಒಂದು ಸ್ಥಳವಿದೆ. ಆ ಊರಿನಹತ್ತಿರ ಕಾವೇರೀನದಿಯು ಅಖಂಡವಾಗಿ ಹರಿಯುವುದು. ಆ ಹೊಳೆಯ ಒಂದುಭಾಗಕ್ಕೆ ಅರ್ಕಪುಷ್ಕರಿಣಿ ಎಂದು ಹೆಸರಾಗಿದೆ. ಹೊಳೆಗೆ ಸಮೀಪವಾಗಿ ಅರ್ಕೇಶ್ವರಸ್ವಾಮಿಯ ದೇವಸ್ಥಾನವಿದೆ. ಗರ್ಭಗೃಹದಲ್ಲಿರುವ ಅರ್ಕೇಶ್ವರನ ತಲೆಯಮೇಲೆ ರಥಸಪ್ತಮಿ ದಿವಸ ಬೆಳಗ್ಗೆ ಸೂರ್ಯನ ಕಿರಣ ಬೀಳುವುದೆಂದು ಸ್ಥಳಪುರಾಣವಿದೆ. ಕಾವೇರೀ ನದಿಯ ಪ್ರಭಾವದಿಂದ ಭೂಮಿಯೆಲ್ಲಾ ಕಣ್ಣಿಗೆಕಾಣುವವರೆಗೂ ಗದ್ದೆಯಾಗಿದೆ. ಹೀಗೆ ಅಖಂಡ ಕಾವೇರಿಯಲ್ಲಿರುವ ಅರ್ಕಪುಷ್ಕರಿಣೀ ಸ್ನಾನವೂ, ಅರ್ಕೇಶ್ವರಸ್ವಾಮಿಯ ದರ್ಶನವೂ ಮುಕ್ತಿಗೆ ಅನುಕೂಲವಾ

ದ್ದಲ್ಲದೆ, ಭೂಗುಣದಿಂದಲೂ ಜಲಸಮೃದ್ಧಿಯಿಂದಲೂ ಭುಕ್ತಿಗೂ ಅಚ್ಚುಕಟ್ಟಾಗಿರುವುದು. ಇಂಥಾ ಸ್ಥಳವು ಬ್ರಾಹ್ಮಣವಾಸಕ್ಕೆ ಬಹಳ ಎತ್ತಿದ್ದಾದ್ದರಿಂದ, ಬಹುಕಾಲದಿಂದಲೂ ಅಲ್ಲಿ ಅನೇಕ ಬ್ರಾಹ್ಮಣ್ಯವಿತ್ತು. ಅಲ್ಲಿನ ಬ್ರಾಹ್ಮಣರೆಲ್ಲರೂ ವಿಶೇಷವಾಗಿ ಅಧ್ಯಾಪಕರಾಗಿಯೂ ಅಗ್ನಿಹೋತ್ರಿಗಳಾಗಿಯೂ ಶಾಸ್ತ್ರಜ್ಞರಾಗಿಯೂ ಇದ್ದದ್ದಲ್ಲದೆ, ಅತಿಯಾಗಿ ಲೌಕಿಕ ಲಂಪಟರಲ್ಲದೆ ಕರ್ಮಠರಾಗಿದ್ದರು.

ಅಲ್ಲಿನ ಬ್ರಾಹ್ಮಣರ ಯೋಗ್ಯತೆಯ ವಿಚಾರದಲ್ಲಿ ಒಂದು ಇತಿಹಾಸ ಉಂಟು. ಪೂರ್ವಕಾಲದಲ್ಲಿ ಒಬ್ಬ ದೊರೆಯು ಈ ಎಡತೊರೆಗೆ ಬಂದನು. ಆ ಊರಲ್ಲಿ ಸಿಕ್ಕಬಹುದಾದ ಮನೆಗಳಲ್ಲಿ ಯೋಗ್ಯವಾದ್ದನ್ನು ನೋಡಿ ದೊರೆಗೆ ಬಿಡಾರವನ್ನು ಬಿಡಿಸಿದರು. ಅರಸನು ತನ್ನ ಪರಿವಾರದೊಡನೆ ಆ ಗೃಹದಲ್ಲಿ ಬಂದು ಇಳಿದುಕೊಂಡನು. ಬಂದ ಒಂದೆರಡು ದಿವಸದಮೇಲೆ ಪ್ರಾತಃಕಾಲದಲ್ಲಿ ದೊರೆಯು ಹಜಾರದಲ್ಲಿ ಶತಪದವನ್ನು ಸುತ್ತುತಾ ಇದ್ದನು. ಒಂದು ಚಿಕ್ಕಮನೆಯ ದ್ವಾರಬಂಧನದ ಮೇಲುಗಡೆ ಗೋಡೆಯಮೇಲೆ ಅಕ್ಷತೆಯಲ್ಲಿ "ಅಗ್ನಿಹೋತ್ರದ ಮನೆ" ಎಂದು ಬರೆದಿತ್ತು. ಅದು ರಾಜನ ದೃಷ್ಟಿಗೆ ಬಿತ್ತು. ಕೂಡಲೆ ಅವನು ಸ್ಥಳದ ಅಧಿಕಾರಿಗಳನ್ನು ಕರೆಯಿಸಿ ಆ ಮನೆ ಯಾರದೆಂದು ಕೇಳಲು, ಒಬ್ಬಾನೊಬ್ಬ ಯಜ್ಞೇಶ್ವರ ಸೋ

ಮಯಾಜಿಗಳದೆಂದು ಗೊತ್ತಾಯಿತು. ತರುವಾಯ ಆ ಸೋಮಯಾಜಿಯನ್ನು ಕರೆಯಿಸಿ ಅರಸನು—ಏನು ಸ್ವಾಮಿ, ಈ ಚಿಕ್ಕ ಮನೆಯ ಮೇಲುಗಡೆ "ಅಗ್ನಿಹೋತ್ರದ ಮನೆ" ಎಂದು ಯಾಕೆ ಬರೆದಿರಿ? ಎಂಬದಾಗಿ ಕೇಳಲು, ಆ ಬ್ರಾಹ್ಮಣನು —ಪ್ರಭುವೆ, ಮತ್ತೆ ಯಾವ ಕೆಟ್ಟ ಕಾರ್ಯಗಳಿಗೂ ಅದನ್ನು ಉಪಯೋಗಿಸದೇ ಇರಲಿ ಎಂದು ಹಾಗೆ ಬರೆದೆ, ಎಂಬದಾಗಿ ಉತ್ತರಕೊಟ್ಟನು. ಆಮೇಲೆ ದೊರೆಯು, ಆತನಿಗೆ ಬಹುಮಾನಮಾಡಿ, ತಾನು ಕೊಡುವ ನಿತ್ಯದಾನವನ್ನು ಆ ದಿನ ಆ ಸೋಮಯಾಜಿಗೆ ಕೊಡಲುಹೋದನು. ಸೋಮಯಾಜಿಯು ದಾನವನ್ನು ತೆಗೆದುಕೊಳ್ಳುವುದಕ್ಕಾಗಿ ತನ್ನ ಎಡಗೈಯನ್ನು ನೀಡಿದನು. ಇದನ್ನು ಕಂಡು ದೊರೆಗೆ ಕೋಪಬಂತು. ಆಗ ಅವನು — ನಾನು ದಾನವನ್ನು ಕೊಡುವುದಕ್ಕೆ ಬಂದರೆ ಎಡಗೈಯನ್ನು ಒಡ್ಡುತೀರಾ? ಎಂದು ಕುಪಿತನಾಗಿ ಮಾತಾಡಿದನು. ಅದಕ್ಕೆ ಸೋಮಯಾಜಿಯು—ಪ್ರಭುವೆ, ಕೋಪಬೇಡ, ಬ್ರಾಹ್ಮಣನ ಬಲಗೈಯಲ್ಲಿ ಯಜ್ಞೇಶ್ವರನಿದಾನೆಂದು ಶಾಸ್ತ್ರವಿದೆ. ಬಲಗೈಯಲ್ಲಿ ನೀನು ಕೊಟ್ಟದಾನವನ್ನು ಸ್ವೀಕರಿಸಿದರೆ ಅದು ಸುಟ್ಟುಹೋದೀತಲ್ಲ ಎಂಬ ಭಯದಿಂದ ಎಡಗೈಯನ್ನು ಒಡ್ಡಿದೆನೈ, ಎಂದು ಉತ್ತರಕೊಟ್ಟನು. ಈಗ ನಿಮ್ಮ ಕೈಯಲ್ಲಿ ಯಜ್ಞೇಶ್ವರ ಇದಾನೆಯೋ? ಎಂದು ಅರ

ಸನು ಪ್ರಶ್ನೆಮಾಡಲು, ಸೋಮಯಾಜಿಯು—ಪರೀಕ್ಷೆ ಮಾಡಬಹುದೆಂದು ಹೇಳಿ, ಸ್ವಲ್ಪ ಜೀರಣೀಹುಡಿಯನ್ನು ತರಿಸಿ ತನ್ನ ಬಲದಅಂಗೈಗೆ ಉದುರಿಸಿದನು. ಆ ಜೀರಣೀಹುಡಿಯು ಸೀದು ಹೊಗೆಯಾಡುವುದಕ್ಕೆ ಮೊದಲಾಯಿತು. ಈ ಮಹತ್ತನ್ನು ಕಂಡು ದೊರೆಗೆ ಅತ್ಯಾಶ್ಚರ್ಯವುಂಟಾಯಿತು. ಕೂಡಲೆ ಅರಸು ಎದ್ದು ಆ ಬ್ರಾಹ್ಮಣನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಬೇಕಾದಷ್ಟು ಸರ್ವಮಾನ್ಯಗಳನ್ನೂ ಮಾಸಾಶನವನ್ನೂ ಮಾಡಿಕೊಟ್ಟು ಹೊರಟುಹೋದನು.

ಯಡತೊರೆ ಕ್ಷೇತ್ರವನ್ನು ಕುರಿತು ಇಂಥಾ ಒಂದು ಇತಿಹಾಸವಿದೆ. ನಾವು ನಂಬುವಷ್ಟಿನ ತಿರುಳು ಇದರಲ್ಲಿರಲಿ, ಇಲ್ಲದೇ ಇರಲಿ, ಕೊನೆಗೆ ಇಂಥಾ ಅತಿಶಯೋಕ್ತಿಗಳನ್ನು ಕಲ್ಪಿಸುವ ಮಟ್ಟಿಗೂ ಆ ಕ್ಷೇತ್ರವಾಸಿಗಳ ನೈಷ್ಠಿಕತೆ ಉತ್ತಮವಾಗಿತ್ತೆಂಬುವುದಕ್ಕೆ ಸಂದೇಹವಿಲ್ಲ. ಇಂಥಾ ಪುಣ್ಯಸ್ಥಳದಲ್ಲಿ ಕಾಶ್ಯಪ ಗೋತ್ರದ ಆಪಸ್ತಂಬಸೂತ್ರದ ತೆಲುಗು ಭಾಷೆಯ ಮುಲಿಕಿನಾಡುಕುಲದ ಒಂದಾನೊಂದು ಬ್ರಾಹ್ಮಣ ಸಂಸಾರವು ಕರ್ಮದಲ್ಲಿಯಾಗಲಿ, ಆಚಾರದಲ್ಲಿಯಾಗಲಿ, ಪಾಂಡಿತ್ಯದಲ್ಲಿಯಾಗಲಿ, ಯಾರಿಗೂ ಕಡಮೆ ಇಲ್ಲದೆ ಸುಖವಾಗಿತ್ತು. ಈ ಮನೆಯಲ್ಲಿ ಒಬ್ಬ ಯಜ್ಞನಾರಾಯಣಶಾಸ್ತ್ರಿ ಎಂಬಾತನು ವಿಶೇಷ ಕರ್ಮಠನಾಗಿ ಅಗ್ನಿಹೋತ್ರವನ್ನು ಇಟ್ಟು

ಕೊಂಡು, ಅಗ್ನಿಷ್ಟೋಮ, ಅತಿರಾತ್ರ, ಈ ಯಜ್ಞಗಳನ್ನು ಮಾಡಿ, ತನ್ನ ೬೦ನೇ ವಯಸ್ಸಿನಲ್ಲಿ ಈ ಸೀಮೆಯನ್ನೇ ಬಿಟ್ಟು, ಕಣವೇಕೆಳಗೆ ತಿರುನಲ್ವೇಲಿ ಸಮೀಪದಲ್ಲಿರತಕ್ಕ ಸೇರಮಹಾದೇವಿ ಎಂಬ ಗ್ರಾಮಕ್ಕೆ ಹೋಗಿ, ಹೆಂಡತಿ ಮಕ್ಕಳುಗಳಮೇಲಿನ ಹಂಬಲು ಲೇಶವೂ ಇಲ್ಲದೆ ಆಶ್ರಮವನ್ನು ತೆಗೆದುಕೊಂಡು, ಸನ್ಯಾಸಿಯಾಗಿಯೇ ೧೦ ವರುಷ ಬದುಕಿದ್ದು, ತನ್ನ ೭೦ನೇ ವರುಷದಲ್ಲಿ ಸಿದ್ಧಿಯನ್ನು ಹೊಂದಿದನು. ಈತನು ಮೃತನಾದ ೮ ವರುಷದಮೇಲೆ ಆ ಸೀಮೆಯ ಒಬ್ಬ ಬ್ರಾಹ್ಮಣನು ಎಡತೊರೆಗೆ ಬಂದು ಯಜ್ಞನಾರಾಯಣಶಾಸ್ತ್ರಿಯ ಮಗನಾದ ಪಾಪಶಾಸ್ತ್ರಿಗೆ ಆ ಸಂಗತಿಯನ್ನು ತಿಳಿಸಿದನು. ಆಗ ಅಪರಕರ್ಮ ಮೊದಲಾದ್ದೆಲ್ಲಾ ಜರಗಿತು. ಯಜ್ಞನಾರಾಯಣಶಾಸ್ತ್ರಿಯ ಮನೋನಿಶ್ಚಯವೂ, ಅದರಿಂದ ಹುಟ್ಟಿದ ವೈರಾಗ್ಯವೂ, ಜನರೆಲ್ಲಾ ಕೊಂಡಾಡತಕ್ಕದ್ದಾಗಿಯೇ ಇತ್ತು.

ಈತನ ಮಗನಾದ ಪಾಪಶಾಸ್ತ್ರಿ ಅಥವಾ ನಾರಾಯಣಶಾಸ್ತ್ರಿಯು ವೇದಾಧ್ಯಯನ ಸಂಪನ್ನನಾಗಿ, ಶ್ರೌತ ಕರ್ಮವನ್ನು ಚೆನ್ನಾಗಿ ತಿಳಿದುಕೊಂಡು ಒಳ್ಳೇ ನಿಷ್ಠನಾಗಿದ್ದನು. ಪ್ರಾತಸ್ನಾನ ಸಹಸ್ರಗಾಯತ್ರಿ ಜಪ ಮುಂತಾದ್ದನ್ನು ಒಂದು ದಿನವಾದರೂ ಈತನು ಬಿಟ್ಟವನಲ್ಲ. ಈತನ ಮಗನು ಈ

ತನ ಕಣ್ಣೆದುರಿಗೇ ಸತ್ತುಹೋಗಿ ಶವ ಇನ್ನೂ ಎತ್ತದೇ ಬಿದ್ದಿದ್ದಾಗ್ಗ್ಯೂ, ಮನೋವಿಕಾರವನ್ನು ವಿಶೇಷವಾಗಿ ತೋರಿಸದೆ, ಆಗ ಕೂಡ ಈತನು ಎಂದಿನಂತೆ ಪಂಚಪಂಚ ಉಷಃಕಾಲಕ್ಕೆ ನದಿಗೆ ಹೋಗಿ ಸ್ನಾನವನ್ನು ಮಾಡಿಕೊಂಡು ಬಂದು ತರುವಾಯ ಮಗನ ಶವವನ್ನು ಎತ್ತಿಸಿದನಂತೆ. ಶೋಕಕ್ಕೆ ಎಡೆಗೊಡದೆ ಮನಸ್ಸನ್ನು ಜಿತವಾಗಿ ನಿಲ್ಲಿಸಿಕೊಂಡು ತನ್ನ ಕರ್ಮವೇ ತನಗೆ ದೊಡ್ಡದೆಂದು ತಿಳಿದು, ಅದನ್ನು ಅಂಥಾ ಸಂದರ್ಭದಲ್ಲಿಯೂ ಬಿಡದೇ ಆಚರಿಸುವ ಬುದ್ಧಿಯು ಸಾಧಾರಣರಿಗೆ ಹುಟ್ಟತಕ್ಕದ್ದಲ್ಲ. ಈತನು ೯೩ ವರುಷ ಬದುಕಿದ್ದು ಮೃತಿಹೊಂದಿದನು. ಈತನ ಮಗನಾದ ನರಸಿಂಹಶಾಸ್ತ್ರಿಯು ವೇದಾಧ್ಯಯನ ಸಂಪನ್ನನಾಗಿ, ಒಳ್ಳೇ ಸಾಹಿತಿಯಾಗಿದ್ದನು. ಮತ್ತು ತರ್ಕವೇದಾಂತಗಳನ್ನು ತಿಳಿದು ಪಾಠವನ್ನು ಚೆನ್ನಾಗಿ ಹೇಳತಕ್ಕ ಪಂಡಿತನೆಂದು ಹೆಸರಪಡೆದಿದ್ದನು. ಈತನಿಗೆ ಮೈಸೂರ ಅರಮನೆಯಲ್ಲಿ ೫೦. ವರಹ ಸಂಬಳವಿತ್ತು. ಈತನು ೫೦ನೇ ವಯಸ್ಸಿನಲ್ಲಿ ತಂದೆಯಾದ ಪಾಪಶಾಸ್ತ್ರಿಯ ಕಂಣಮುಂದೆ ತೀರಿಹೋದನು.

ನರಸಿಂಹಶಾಸ್ತ್ರಿಯು ಹೆಂಡತಿಯು ಶಿವಗಂಗೆಯು ಹೆಂಣು ಮಗಳು. ಈಕೆಯು ತೌರುಮನೆಯವರೂ ಸಾಧಾ

ರಣವಾಗಿ ವಿದ್ಯಾವಂತರಾಗಿಯೇ ಇದ್ದರು; ಈ ಸಂಸಾರವು ಪೂರ್ವದಲ್ಲಿ ಕುಣಿಗಿಲಲ್ಲಿದ್ದಂತೆ ತಿಳಿಯಬರುತ್ತೆ. ನರಸಿಂಹಶಾಸ್ತ್ರಿಗೆ ಮೊದಲು ಇಬ್ಬರು ಗಂಡುಮಕ್ಕಳು ಹುಟ್ಟಿದರು. ಹಿರೀಮಗನ ಹೆಸರು ನರಸಿಂಹಶಾಸ್ತ್ರಿ. ಈತನು ದೊಡ್ಡ ಘನಪಾಠಿಯಾಗಿದ್ದನು. ಈತ ಸೌಮ್ಯ ಸಂವತ್ಸರದಲ್ಲಿ ಕಾಶಿಗೆಹೋಗಿ ಸನ್ಯಾಸವನ್ನು ತೆಗೆದುಕೊಂಡು ಸಾಧಾರಣ ಸಂವತ್ಸರದಲ್ಲಿ ಸಿದ್ಧರಾದಂತೆ ತಿಳಿಯಬರುತ್ತೆ. ಎರಡನೇ ಮಗನೇ ಆ ಮಹಾಪಂಡಿತನಾದ ರಾಮಶಾಸ್ತ್ರಿ. ಮಾತಾಮಹರ ಮನೆಯ ಆದಿಸ್ಥಳವಾದ ಕುಣಿಗಲು ಹೇಗೆಯೋ ರಾಮಶಾಸ್ತ್ರಿಗಳಿಗೆ ಅಡ್ಡಹೆಸರಾಗಿ ಕುಣಿಗಲ ರಾಮಶಾಸ್ತ್ರಿ ಎಂತಲೇ ಪ್ರಸಿದ್ಧವಾಯಿತು. ಇವರಿಗೆ ಮೈಸೂರ ಪ್ರಾಂತ್ಯದಲ್ಲಿ ಕುಣಿಗಲ ರಾಮಶಾಸ್ತ್ರಿ ಎಂತಲೂ, ಬೆಂಗಳೂರ ಪ್ರಾಂತ್ಯದಲ್ಲಿ ಯಡತೊರೆ ರಾಮಶಾಸ್ತ್ರಿ ಎಂತಲೂ, ಕಣಿವೇ ಕೆಳಗೆ ದಕ್ಷಿಣದೇಶದಲ್ಲಿ ಮೈಸೂರ ರಾಮಶಾಸ್ತ್ರಿ ಎಂತಲೂ ಪ್ರಖ್ಯಾತಿಯಾಗಿದೆ.

---

## ೨ನೇ ಅಧ್ಯಾಯ.

### ಜನನ ಮತ್ತು ಬಾಲ್ಯದಶೆ.

ಈ ರಾಮಶಾಸ್ತ್ರಿಯು ಪ್ರಭವ ಸಂವತ್ಸರದ ಚೈತ್ರ ಬಹುಳ [illegible] ದಿವಸ ಸ್ವಾತೀನಕ್ಷತ್ರದಲ್ಲಿ ಶ್ರೀರಂಗಪಟ್ಟಣಕೋದ

ಎಂಟನೇ ವರುಷದಲ್ಲಿ ಶಿವಗಂಗೆಯೊಳು ಮಾತಾಮಹರ ಮನೆಯಲ್ಲಿ ಜನಿಸಿದನು. ಶಿವಗಂಗೆಯು ಬೆಂಗಳೂರಿಂದ ಸುಮಾರು ೩೪ ಮೈಲಿದೂರವಿದೆ. ಈ ಶಿಶುವು ಭೂಪತನ ವಾದ ಗಳಿಗೆಯಲ್ಲಿಯೇ ಬೆಂಗಳೂರಲ್ಲಿ ಯಾವುದೋ ಒಂದು ರಾಜಕಾರ್ಯಕ್ಕಾಗಿ ಆದ ಗುಂಡಿನ ಸದ್ದು ಕೇಳಿಸಿತು ಎಂದು ಈತನ ತಾಯಿ ಹೇಳುತ್ತಿದ್ದಳು. ಲೋಕೋಪಕಾರಿಗಳಾದ ಪುಣ್ಯಾತ್ಮರು ಹುಟ್ಟುವಾಗ ಇಂಥಾ ಸುಶಕುನಗಳು ಆಗುವ ವು ಎಂಬ ನಂಬಿಕೆಯು ಎಲ್ಲಾ ದೇಶದಲ್ಲಿಯೂ ಎಲ್ಲಾ ಜನ ರಲ್ಲಿಯೂ ಇದೆ. ಇದಕ್ಕೆ ಪರಸ್ಪರ ಸಂಬಂಧವನ್ನು ಯೋ ಚಿಸಿ, ಕಾರ್ಯಕಾರಣಭಾವ ಏನೇನೂ ಇಲ್ಲವೆಂದು ತಿರ ಸ್ಕಾರ ಮಾಡತಕ್ಕದ್ದು ಕಷ್ಟ. ಇಂಥಾ ಶಕುನವು ಹಾಗೆ ಜನನವನ್ನಾಗಲಿ ಮರಣವನ್ನಾಗಲಿ ಹೊಂದತಕ್ಕ ಪುರುಷ ಶ್ರೇಷ್ಟರ ಬುದ್ಧಿ ಕೌಶಲ್ಯದಲ್ಲಿ ವಳಿತವಾಗಿರುವ ಮನೋ ಪ್ರಪಂಚಕ್ಕೂ ಪಂಚಭೂತ ಜನ್ಯವಾದ ಈ ಬಾಹ್ಯ ಪ್ರ ಪಂಚಕ್ಕೂ ಇರಬಹುದಾದಂಥಾ ಸಂಬಂಧವನ್ನು ತೋರಿ ಸುವ ಸೂಚನೆಗಳಲ್ಲಿ ಒಂದಾಗಿದೆಯೋ, ಅಥವಾ ಅಕಸ್ಮಾ ತ್ತಾಗಿ ಸಂಭವಿಸಿದ ಕಾಕತಾಳೀಯವಾದ ಕಾರ್ಯಗಳ ಸಂಘಟನೆಯೋ, ನಿರ್ಧರಮಾಡುವುದು ಈಗಿನ ಸ್ಥಿತಿಯಲ್ಲಿ ಸಾಧ್ಯವಾಗಿ ತೋರಲಿಲ್ಲ. ಇವುಗಳ ಸಂಬಂಧ ಎಂತಾದರೂ

ಇರಲಿ; ಮಹಾಕಾರ್ಯಗಳಿಗೂ ಇಂಥಾ ಶುಭ ಸೂಚನೆಗ ಳಿಗೂ ಪರಸ್ಪರ ಸಂಘಟನೆಯಾಗುವುದೇನೋ ಪ್ರಾಯೇಣ ಬಿಡದೆ ನಡೆಯುತ್ತಿದೆ.

ರಾಮಶಾಸ್ತ್ರಿಯು ಬಾಲ್ಯದಿಂದಲೂ ಆರೋಗದೃಢಕಾ ಯನಾಗಿಯೇ ಇರುತಿದ್ದನು. ಬಾಲ್ಯದಲ್ಲಿ ಚೇಷ್ಟೆ ಬಹು ಬಲವಾಗಿತ್ತು. ಆಟದಲ್ಲಿ ವಿಶೇಷವಾಗಿ ಮನಸ್ಸು ಉಂಟು. ಹುಡುಗರು ಚೇಷ್ಟೆ ಮಾಡಿದರೆ ಅನೇಕರಿಗೆ ಸರಿಬೀಳುವು ದಿಲ್ಲ. ಆದರೆ ಬುದ್ಧಿ ಬಲವಾಗಿದ್ದರೆ ಅದು ಸುಮ್ಮನೆ ಇರ ಗೊಳಿಸುವುದಿಲ್ಲ; ಯಾವ ಕಾರ್ಯದಲ್ಲಿಯಾದರೂ ಸರಿಯೆ, ಪ್ರವೇಶಮಾಡುತ್ತಲೇ ಇರುವುದು, ದೊಡ್ಡವರಾದರೆ ದೊಡ್ಡ ಕೆಲಸಗಳಲ್ಲಿ ಅದು ಉಜ್ಜುಗಿಸುವುದು; ಹುಡುಗರಾದರೆ ಅನು ಭವ ಕಡಮೆಯಾದ್ದರಿಂದ ಸಣ್ಣ ಕೆಲಸದಲ್ಲಿಯೂ ಹೊ ಕ್ಕು, ಯಾವಯಾವ ಪದಾರ್ಥದಿಂದ ಯಾವಯಾವ ಅನು ಭವ ಬಾಲಕರಿಗೆ ಉಂಟಾಗಬೇಕೋ ಅದೆಲ್ಲವನ್ನೂ ದೊರ ಕಿಸಿಕೊಡುವುದು. ಆದರೆ ಬಾಲಕರು ಅಂಥಾ ಅನುಭವ ವನ್ನು ಮಾತ್ರ ಹೊಂದುವರೇ ಹೊರತು ಪದಾರ್ಥವನ್ನು ಯಾವ ಪರಿಯಲ್ಲಿ ದೊಡ್ಡವರು ಇಟ್ಟಿದ್ದರೋ ಆ ಪರಿಯಲ್ಲಿ ಮತ್ತೆ ಇಡಲು ಸಾಮರ್ಥ್ಯ ಸಾಲದಕಾರಣ, ಅದು ಚೇಷ್ಟೆ ಎಂದು ಭಾವಿಸಿ ಹುಡುಗರನ್ನು ಶಿಕ್ಷಿಸುವುದು

ಅಂಧಪರಂಪರೆಯಾದ ವಾಡಿಕೆಯಾಗಿದೆ. ಚೇಷ್ಟೆ ಮಾಡಿದ್ದರಿಂದ ಮಕ್ಕಳಿಗೆ ಉಂಟಾಗುವ ಪ್ರಯೋಜನ ಚೇಷ್ಟೆ ಮಾಡದೆ ಸುಮ್ಮನೆ ಇದ್ದರೆ ಉಂಟಾಗುವುದಿಲ್ಲವಾದ್ದರಿಂದ, ದೊಡ್ಡವರಿಗೆ ಸ್ವಲ್ಪ ಶ್ರಮವಾದರೂ ಮಗುವಿಗೆ ಒಂದಕ್ಕೆ ಹತ್ತರಷ್ಟು ಆದಾಯವಾಯಿತೆಂದು ತಿಳಿಯಬೇಕು. ಹುಡುಗರು ಆಡುವ ಆಟಗಳು ಸಹಿತವಾಗಿ ತಿಳವಳಿಕೆಯನ್ನೂ ಅಂಗಪುಷ್ಟಿಯನ್ನೂ ವೃದ್ಧಿಮಾಡುವವು. ಆದ್ದರಿಂದ ಮಕ್ಕಳು ಚೇಷ್ಟೆಯನ್ನು ಮಾಡುತ್ತಾ ಆಟವನ್ನು ಆಡುತ್ತಾ ಇರುವಾಗ, ಅವರು ಮಿತಿಮೀರಿ ಅಪಾಯವನ್ನು ತಂದುಕೊಳ್ಳದೇ ಇರುವಮಟ್ಟಿಗೆ ನಾವು ನೋಡಿಕೊಳ್ಳಬೇಕೇ ಅಲ್ಲದೆ, ಇದಕ್ಕಿಂತಲೂ ಹೆಚ್ಚಾಗಿ ಮಕ್ಕಳ ಗೋಜಿಗೆ ಹೋಗಕೂಡದು.

ಇಂಥಾ ಚೇಷ್ಟೆಯೂ ಆಟಪಾಟಗಳೂ ಹುಡುಗನಾದ ರಾಮನಲ್ಲಿ ಇರುತ್ತಿತ್ತು. ಇವನು ಯಾವ ಆಟಕ್ಕೆ ಹೋದಾಗ್ಯೂ ಅದರಲ್ಲೆಲ್ಲಾ ಘಟಕನೆನ್ನಿಸಿಕೊಂಡು ಇತರರನ್ನು ಸೋಲಿಸುತ್ತಿದ್ದನು. ಜೊತೇ ಹುಡುಗರಲ್ಲಿ ಏನಾದರೂ ಜಗಳಹುಟ್ಟಿದರೆ ಅವರನ್ನು ಹಿಡಿದು ಮುಖನೋಡದೆ ಚೆನ್ನಾಗಿ ಹೊಡೆಯುತ್ತಿದ್ದನು. ಬೆಂಗಳೂರ ತಾಲ್ಲೋಕಿನಲ್ಲಿ ಆಮಿಲನಾಗಿದ್ದು ಬೆಂಗಳೂರ ಡಿವೀಜನ ಶಿರಸ್ತೇ

ಹುದ್ದೆಯನ್ನು ಮಾಡಿದ ದಿವಾನ್ ಸೂರಪ್ಪ ಎಂಬಾತನು ಬಾಲ್ಯದಲ್ಲಿ ಈ ರಾಮನಿಂದ ಚೆನ್ನಾಗಿ ಪೆಟ್ಟುತಿಂದು ಇದ್ದನು. ಈ ಅಧಿಕಾರಿಯು ವಿಶೇಷ ಪ್ರಸಿದ್ಧಿಗೆ ಬಂದ ರಾಮಶಾಸ್ತ್ರಿಯನ್ನು ಕಂಡಾಗೆಲ್ಲಾ—ಶಾಸ್ತ್ರಿಗಳೆ, ತಮ್ಮ ಕೈಪೆಟ್ಟಿನ ಕಲೆ ಇನ್ನೂ ನನ್ನ ತಲೇಮೇಲೆ ಇದೆ, ಹೋಗಿಲ್ಲ, ಎಂದು ಆ ಕಲೆಯನ್ನು ತೋರಿಸುತಿದ್ದದೂ ಅಲ್ಲದೆ—ಆಗ ಕೈಯಿಂದ ಎಲ್ಲರನ್ನೂ ಪ್ರಹರಿಸಿ ಗೆಲ್ಲುತಿದ್ದಿರಿ; ಈಗ ಪಾಂಡಿತ್ಯದಿಂದ ಲೋಕವನ್ನೇ ಪ್ರಹರಿಸಿ ಗೆಲ್ಲುತಿದ್ದೀರಿ, ಎಂದು ಪರಿಹಾಸ ಮಾಡುತಿದ್ದನು. ಹೀಗೆ ಉತ್ತರೋತ್ತರ ಉಂಟಾದ ವಿಜಯದ ಮೊಳಕೆಯು ಬಹುಬಲವಾಗಿ ವೃದ್ಧಿಯಾಗುತಿತ್ತು. ರಾಮನು ಯಡತೊರೆಯಲ್ಲಿರುವ ಕಾವೇರೀನದಿಯನ್ನು ಈಜಿಕೊಂಡು ತಡಿಯಿಂದ ತಡಿಗೆ ಪದೇಪದೆ ಹಾದುಹೋಗುತಿದ್ದನು. ಈಜುವುದರಲ್ಲಿ ಈತನಿಗೆ ಆಸಕ್ತಿ ಹೆಚ್ಚು. ಒಂದು ದಿವಸ ಅಕಸ್ಮಾತ್ತಾಗಿ ಒಬ್ಬ ಹೆಂಗಸು ನದಿಗೆ ಜಾರಿಬಿದ್ದು ಕೊಚ್ಚಿಕೊಂಡು ಹೋಗುತಿದ್ದಳು. ರಾಮಶಾಸ್ತ್ರಿಯು ನದಿಗೆ ಧುಮ್ಮಿಕ್ಕಿ ಆ ಹೆಂಗಸಿನ ತಲೇಕೂದಲನ್ನು ಹಿಡಿದು ತಡಿಗೆ ಎಳೆದು ತಂದನು. ಮತ್ತು ಈತನೂ ಅಲ್ಲಿದ್ದ ಜನರೂ ಸಹ ಆಕೆ ಕುಡಿದಿದ್ದ ನೀರನ್ನು ಹೊರಡಿಸಲು ಮೈಗೆ ಬೂದಿ ಮೊದಲಾದ್ದನ್ನು ತಿಕ್ಕಿದರು. ಹೀಗೆ ಆಕೆಯ ಪ್ರಾಣವನ್ನು

ರಾಮನು ಕಾಪಾಡಿದನು. ಬಾಲ್ಯದಲ್ಲಿ ಹೀಗೆ ವಿಶೇಷವಾಗಿ ಆಡಿಕೊಂಡಿದ್ದದು ಉತ್ತರೋತ್ತರ ದೇಹದಾರ್ಢ್ಯಕ್ಕೆ ಅನು ಕೂಲವಾಯಿತು.

ಈತನ ತಂದೆಯಾದ ಲಕ್ಷ್ಮೀನರಸಿಂಹಶಾಸ್ತ್ರಿಗೆ ಮಗನ ಪಟುತ್ವ ಗೊತ್ತಾಗದೆ ಇರಲಿಲ್ಲ. ಯಥಾವಿಧಿಯಾಗಿ ಉಪ ನಯನಾದಿಗಳು ನಡೆದವು. ತಾತನಾದ ಪಾಪಶಾಸ್ತ್ರಿಯು ವೇ ದವನ್ನು ಅಧ್ಯಯನ ಹೇಳುವುದಕ್ಕೆ ಮೊದಲುಮಾಡಿದನು. ತರುವಾಯ ಸಂಸ್ಕೃತಭಾಷಾ ಜ್ಞಾನವಾಗುವುದಕ್ಕಾಗಿ, ರಘು ವಂಶವೇ ಮೊದಲಾದ ಕಾವ್ಯಗಳಲ್ಲಿ ಪಾಠಹೇಳುವ ಪರಂ ಪರೆಯಾದ ಪದ್ಧತಿಯನ್ನು ಅನುಸರಿಸಿದ್ದಾಯಿತು. ಭಾಷೆ ಯಲ್ಲಿ ಜ್ಞಾನವಾದಕೂಡಲೆ, ತರ್ಕಶಾಸ್ತ್ರವ್ಯಾಸಂಗಕ್ಕೆ ಮೊ ದಲಾಯಿತು. ಆಗ ಈತನ ತಂದೆಯಾದ ಲಕ್ಷ್ಮೀನರಸಿಂಹ ಶಾಸ್ತ್ರಿಯು ಯಡತೊರೆಯಲ್ಲಿ ದೈವಾಧೀನನಾದನು. ಆ ಕಾಲ ದಲ್ಲಿ ರಾಮಶಾಸ್ತ್ರಿಗೆ ಹದಿನೈದು ವರುಷ ವಯಸ್ಸು.

ಮುಂದಕ್ಕೆ ರಾಮಶಾಸ್ತ್ರಿಗೆ ಪಾಠಾದಿಗಳು ನಡೆಯಲು ಅಡ ಚಣೆ ಬಂತು. ಈ ಯೋಚನೆ ಈತನ ತಾಯಿಯ ಮನ ಸ್ಸಿಗೂ ತಟ್ಟಿತು. ಈಗಿನ ನವೀನರೀತ್ಯಾ ಸ್ತ್ರೀವಿದ್ಯಾಭ್ಯಾಸ ವನ್ನೇ ಅರಿಯದೇ ಇದ್ದಾಗ್ಯೂ, ಮಗನಲ್ಲಿರುವ ಚಾತುರ್ಯವ ನ್ನರಿತು, ಅದಕ್ಕೆ ತಕ್ಕಂಥಾ ವಿದ್ಯಾಭ್ಯಾಸವೂ ವ್ಯಾಸಂಗವೂ

ಆದಲ್ಲಿ, ಅದು ಪರಿಮಳಿಸುವುದಕ್ಕೆ ಸಂಶಯವಿಲ್ಲವೆಂದು ತಿಳಿಯುವಮಟ್ಟಿನ ವಿವೇಕವು ಆಕೆಯಲ್ಲಿ ಇತ್ತೆಂದು ಕಂಡು ಬಂದಿದೆ. ಇಂಥಾ ಮಗನ ವ್ಯಾಸಂಗಕ್ಕೆ ಯಡತೊರೆಯು ತಕ್ಕ ಸ್ಥಳವಾಗಿರಲಿಲ್ಲ. ಈ ಊರು ಆಚಾರಶೀಲರಾದ ಪುರುಷರನೇಕರಿಗೆ ಎಷ್ಟೋ ಆವಾಸಸ್ಥಾನವಾಗಿದ್ದಾಗ್ಯೂ, ಆ ಸ್ಥಳದಲ್ಲಿ ಪಂಡಿತರಿಗೆ ಅಂಥಾ ಅವಲಂಬನವಿರಲಿಲ್ಲ. ಕೊಡಗೈಯುಳ್ಳ ರಾಜ ಅಥವಾ ದ್ರವ್ಯಸ್ಥನ ಸಹಾಯವಿಲ್ಲದೆ, ಪಾಂಡಿತ್ಯವು ಎಂದಿಗೂ ಪ್ರಕಾಶಕ್ಕೆ ಬಂದಿಲ್ಲವೆಂಬುವುದು ಲೋಕಪ್ರಸಿದ್ಧವಾಗಿದೆ. ಅಂಥಾ ಅವಲಂಬನವು ಮೈಸೂರ ಮಹಾರಾಜರಾದ ಶ್ರೀಕೃಷ್ಣರಾಜ ಪ್ರಭುವಿನ ಸನ್ನಿಧಿಯಲ್ಲಿ ಅಧಿಕವಾಗಿ ದೊರೆಯುತಿದ್ದುದರಿಂದ, ಮೈಸೂರಿಗೆ ಸುತ್ತಮುತ್ತಿನ ಊರುಗಳಲ್ಲಿದ್ದ ವಿದ್ವಾಂಸರೆಲ್ಲಾ ಬಂದು ಆಸ್ಥಾನದಲ್ಲಿ ಸೇರಿಕೊಂಡಿದ್ದರು. ಆದಕಾರಣ ವರ್ಧಿಷ್ಣುವಾಗಿ ವಿದ್ಯಾತುರನಾಗಿದ್ದ ರಾಮನಿಗೆ ಸರಿಯಾದ ಪಾಠವನ್ನು ಹೇಳತಕ್ಕವರು ಮೈಸೂರಲ್ಲಿ ಹೊರತು ಮತ್ತೆಲ್ಲಿಯೂ ಸಿಕ್ಕುವುದು ಕಷ್ಟವಾಗಿತ್ತು. ಇದಕ್ಕಾಗಿ ರಾಮನು ಯಡತೊರೆಯನ್ನು ಬಿಟ್ಟು ಮೈಸೂರಿಗೆ ಹೋದನು.

ಮೈಸೂರಿಗೆ ಬಂದಾಗ ಈ ಬಾಲಕನ ಬುದ್ಧಿ ಎಷ್ಟರ ಮಟ್ಟಿಗೆ ಇತ್ತೆಂಬುವುದನ್ನುದ್ಯೋತಕವಾದಲು ಒಂದು

ಸಂದರ್ಭ ದೊರೆಯಿತು. ಇನ್ನೂ ವಯಸ್ಸು ಚಿಕ್ಕದಾದಾಗ್ಗ್ಯೂ, ಓದಿದ್ದ ಗ್ರಂಥಗಳು ಮಿತವಾಗಿಯೇ ಇದ್ದಾಗ್ಯೂ, ರಾಮನು ಸಭೆಗಳಿಗೆ ನುಗ್ಗಿ ಇದಿರಾಳು ದೊಡ್ಡಪಂಡಿತನಾದರೂ ಮುಖನೋಡದೆ ವಾಕ್ಯಾರ್ಥಗಳಲ್ಲಿ ಪ್ರತಿಭಟಿಸುತಿದ್ದನು. ರಾಮನು ಮೈಸೂರಲ್ಲಿ ಇನ್ನೂ ಓದುತಿರುವಾಗ ಶ್ರೀ ಶೃಂಗೇರಿಸ್ವಾಮಿಗಳವರು ಪಂಡಿತಪರಿವಾರ ಸಮೇತರಾಗಿ ಮೈಸೂರಿಗೆ ದಯಮಾಡಿದರು. ವಾಡಿಕೆ ಪ್ರಕಾರ ಶ್ರೀಮಠದಲ್ಲಿ ಶಾಸ್ತ್ರವಿಚಾರಗಳು ಜರಗುತ್ತಾ ಇದ್ದವು. ವಿದ್ಯಾರ್ಥಿಗಳೂ ಸಹಿತವಾಗಿ ತಂತಮ್ಮ ಯೋಗ್ಯತೆಗಳನ್ನು ತೋರಿಸಿಕೊಳ್ಳುವುದಕ್ಕಾಗಿ ವಾಕ್ಯಾರ್ಥಗಳನ್ನು ಮಾಡುತಿದ್ದರು. ನ್ಯಾಯಶಾಸ್ತ್ರದಲ್ಲಿ ಕಾರಣ ಲಕ್ಷಣದಲ್ಲಿ ಚರ್ಚೆಯನ್ನು ಜರಗಿಸುತಿದ್ದರು. ತಾರ್ಕಿಕರು ಮೊದಲು ಸುಲಭವಾಗಿ ರೂಢವಾಗಿರುವ ವಸ್ತುಗಳನ್ನು ತೆಗೆದುಕೊಂಡು ಕಾರ್ಯಕಾರಣಗಳನ್ನು ತೋರಿಸುತ್ತಾ, ದೊಡ್ಡ ಸಂಗತಿಗಳನ್ನು ಕುರಿತು ಚರ್ಚೆಗೆ ಹೋಗುತ್ತಾರೆ. ಮಡಕೆಯನ್ನು ಆದಿಯಲ್ಲಿ ತೆಗೆದುಕೊಳ್ಳುವುದುಂಟು. ಮಡಕೇಮಾಡುವುದಕ್ಕೆ ಮಣ್ಣು, ಕುಂಬಾರ, ಅವನ ಚಕ್ರ, ಅದನ್ನು ತಿರುಗಿಸುವ ಕೋಲು, ಇವೇ ಮೊದಲುಗೊಂಡು ಕಾರಣಗಳಾಗುತ್ತಿವೆ. ಮಡಕೆಯಾಗಲು ಇನ್ನೂ ಕೆಲವು ಅಪ್ರಕೃತವಾದ ವಿಷಯಗಳು

ಕಾರಣಗಳಂತೆ ತೋರಿದಾಗ್ಯೂ ಅವು ಮುಖ್ಯವಲ್ಲ. ಹೇಗೆಂದರೆ, ಮಡಕೇಮಾಡುವ ಮಂಣನ್ನು ಕತ್ತೇಮೇಲೆ ಹೇರಿ ತರುತ್ತಾರೆ. ಇಷ್ಟುಮಾತ್ರಕ್ಕೇ ಕತ್ತೆಯು ಮಡಕೆಯಾಗುವುದಕ್ಕೆ ಒಂದು ಕಾರಣವಲ್ಲ. ಇದೇ ಮೊದಲಾದ ಅಪ್ರಕೃತವಾದ ಸಂಗತಿಗಳಿಗೆ ತರ್ಕಶಾಸ್ತ್ರದಲ್ಲಿ ಅನ್ಯಥಾಸಿದ್ಧಗಳೆಂದು ಹೆಸರು. ಈ ಸಂಗತಿಯನ್ನು ಕುರಿತು ಇಲ್ಲಿ ತಿಳಿಸಬೇಕಾದ ಒಂದು ಹೆಚ್ಚಿನ ವಿಚಾರವಿದೆ.

ತರ್ಕಸಂಗ್ರಹವೆಂಬ ಸಂಕ್ಷೇಪವಾದ ಒಂದು ಗ್ರಂಥವಿದೆ. ಅದಕ್ಕೆ ದೀಪಿಕೆ ಎಂಬ ವ್ಯಾಖ್ಯಾನ ಹುಟ್ಟಿದೆ. ಈ ದೀಪಿಕೆಯಮೇಲೆ ಮುಕ್ತಾವಳಿ ಎಂಬ ವ್ಯಾಖ್ಯಾನವಿದೆ. ದೀಪಿಕೆಯಲ್ಲಿ ಅನ್ಯಥಾಸಿದ್ಧಗಳು ಮೂರೇ * ಎಂದು ಹೇಳುತ್ತಾರೆ. ಮುಕ್ತಾವಳಿಯಲ್ಲಿ ಅನ್ಯಥಾಸಿದ್ಧಗಳು ಐದು † ಎಂದು ಹೇಳಿದೆ. ಆದರೆ ಐದನೇ ಅನ್ಯಥಾಸಿದ್ಧವು ಎಂದರೆ ಮಂಣನ್ನು ಹೊತ್ತುತರುವ ಕತ್ತೆ, ಎತ್ತು, ಗಾಡಿ, ಕುದುರೆ ಮೊದಲಾದವುಗಳು ಅವಶ್ಯಕವೆಂದು ತಾರ್ಕಿ

* ದೀಪಿಕೆಯಲ್ಲಿ—೧. ದಂಡತ್ವ, ೨. ಆಕಾಶ, ೩. ಗಂಧವನ್ನು ಕುರಿತು ರೂಪಪ್ರಾಗಭಾವ.

† ಮುಕ್ತಾವಳಿಯಲ್ಲಿ—೧. ದಂಡತ್ವ, ೨. ದಂಡರೂಪ, ೩. ಆಕಾಶ, ೪. ಕುಲಾಲನಪಿತ, ೫. ರಾಸಭಾದಿಗಳು.

ಕರು ಪರಿಭಾಷೆಯಾಗಿ ಮಾಡಿಕೊಂಡಿದಾರೆ. ಈ ಐದನೇ ಅನ್ಯಥಾಸಿದ್ಧವು ಅವಶ್ಯ ಕ್ಲಪ್ತನಿಯತಪೂರ್ವವೃತ್ತಿ ಎಂದರೆ ಮಡಕೆಯಾಗಲು ಪ್ರತ್ಯಕ್ಷವಾದ ಕಾರಣವಲ್ಲದಿದ್ದಾಗ್ಯೂ, ಮಡಕೆಯಾಗುವುದಕ್ಕೆ ಪೂರ್ವ ಭಾವಿಯಾಗಿ ಅವಶ್ಯಕವಾಗಿ ಇದ್ದೇ ತೀರತಕ್ಕದ್ದಾಗಿದೆ.

ಹೀಗಿರುವಲ್ಲಿ ಶ್ರೀಮಠದ ವಿದ್ವಾಂಸನಾದ ಹೊಸಹಳ್ಳಿ ರಾಮಶಾಸ್ತ್ರಿ ಎಂಬಾತನು ಇದೇ ಅನ್ಯಥಾಸಿದ್ಧಗಳನ್ನು ಕುರಿತು ಮಠದಲ್ಲಿ ವಾಕ್ಯಾರ್ಥಮಾಡುತ್ತಾ ಇರುವಾಗ್ಗೆ, ವಿದ್ಯಾರ್ಥಿಗಳ ಸಂಗಡ ಸೇರಿಕೊಂಡು ಗುಂಪಿನೊಳಗೆ ಕೂತಿದ್ದ ರಾಮನು ಆ ವಿದ್ವಾಂಸನನ್ನು ಕುರಿತು—ರಾಸಭ ಎಂದರೆ ಕತ್ತೆ ಅವಶ್ಯಕ ಅನ್ಯಥಾಸಿದ್ಧವೆ? ಎಂದು ಸಹಜವಾಗಿ ಕೇಳಿದನು. ಅದಕ್ಕೆ ಹೊಸಹಳ್ಳಿ ರಾಮಶಾಸ್ತ್ರಿಯು ಅವಶ್ಯಕ ಶಬ್ದಕ್ಕೆ ಸಾಧಾರಣ ಅರ್ಥವನ್ನು ಮಾಡಿಕೊಂಡು—ಇದು ನಮಗೆ ಅವಶ್ಯಕವಲ್ಲ, ನಿಮಗೆ ಅವಶ್ಯಕವಾದರೆ ಆಗಬಹುದು ಎಂದನು. ಆಗ ರಾಮಶಾಸ್ತ್ರಿಯು ಆ ಪಂಡಿತನನ್ನು ಕುರಿತು—ಹವುದು, ಕತ್ತೆಯು ಈಗ ನಮಗೆ ಅವಶ್ಯಕವಾಗಿದೆ; ಯಾಕೆಂದರೆ, ಮಡಕೆಯಾಗಲು ಕತ್ತೆ ಒಂದು ಕಾರಣವಾಗದಿದ್ದರೂ ನಮ್ಮ ಶಾಸ್ತ್ರಿಗಳು ಹೀಗೆ ಅರ್ಥಮಾಡಿದಕಾರಣ, ಅವರ ಸವಾರಿಗೆ ಅದು ಬೇಕೇಬೇಕು,

ಎಂದು ಉತ್ತರಕೊಟ್ಟನು. ಇವನ ಚಾತುರ್ಯಕ್ಕೆ ಅಲ್ಲಿ ಇದ್ದ ವರೆಲ್ಲರೂ ಆಶ್ಚರ್ಯಪಟ್ಟರು.

ರಾಮನ ತಂದೆ ಸತ್ತ ಆರು ತಿಂಗಳಿಗೆ ಇದು ಜರಗಿತು. ಅದುವರೆಗೆ ರಾಮನಿಗೆ ಶಾಸ್ತ್ರದಲ್ಲಿದ್ದ ಪರಿಶ್ರಮವು ಇದರಿಂದ ಗೊತ್ತಾಗುವುದು. ವಯಸ್ಸು ೧೫ ವರುಷವಾಗುವುದರೊಳಗಾಗಿ ಸಂಸ್ಕೃತಭಾಷಾ ಜ್ಞಾನವನ್ನು ಮಾಡಿಕೊಂಡು, ತರ್ಕದಲ್ಲಿ ಇಷ್ಟರಮಟ್ಟಿಗೆ ವ್ಯಾಸಂಗವನ್ನು ಮಾಡಿದ್ದನು. ಮತ್ತು ತಾನು ಓದಿದ್ದ ಭಾಗದಲ್ಲಿ ಬಹಿರಂಗವಾದ ವಾಕ್ಯಾರ್ಥವನ್ನು ದೊಡ್ಡವರ ಸಂಗಡಲೂ ಜರಗಿಸಿ ಅವರನ್ನು ಪ್ರತಿಭಟಿಸುವಮಟ್ಟಿಗೆ ಪ್ರಜ್ಞೆ ಉಂಟಾಗಿತ್ತು. ತಾನು ಓದಿದ್ದನ್ನು ಚೆನ್ನಾಗಿ ತಿಳಿದುಕೊಳ್ಳುವುದು, ವಿಷಯವನ್ನು ಗ್ರಹಿಸಿ ತನ್ನ ಬುದ್ಧಿಯಿಂದಲೇ ಅದು ಹುಟ್ಟಿದರೆ ಹೇಗೆಯೋ ಆ ರೀತಿಯಾಗಿ ಅಭಿಪ್ರಾಯವನ್ನು ತಿಳುವಳಿಕೆಗೆ ತಂದುಕೊಳ್ಳುವುದು, ಆ ವಿಧಿಯನ್ನು ಸಮಯವರಿತು ವರ್ತಮಾನದಲ್ಲಿ ತಕ್ಕ ಸಂದರ್ಭಕ್ಕೆ ಪ್ರಯೋಗಿಸುವುದು, ಇದೆಲ್ಲಾ ನಿಜವಾದ ಪ್ರಜ್ಞೆಯುಂಟಾಯಿತೆಂದು ಹೇಳಲು ಮುಖ್ಯವಾದ ಸಂದರ್ಭಗಳಾಗಿವೆ. ಆದರೆ ತನಗೆ ಉಂಟಾದ ತಿಳುವಳಿಕೆಯ ಸಾರಾಂಶ ಇಷ್ಟೇಸರಿ ಎಂದು ದೃಢವಾಗಿ ನಂಬಿ, ಅದಕ್ಕೆ ಪ್ರತಿಯಾಗಿ ಹೇಳಿದ ಮನುಷ್ಯ ಎಂಥಾ ದೊಡ್ಡಪಂಡಿತನಾದಾಗ್ಗೂ ಲಕ್ಷ್ಯೀ

ಕರೆಸದೆ, ಯುಕ್ತಿಯಾಗಿಯೂ ಕಾಚೋದ್ಯವಾಗಿಯೂ ಉತ್ತರ ಕೊಟ್ಟ ರಾಮನ ಧೈರ್ಯವು ಸಾಧಾರಣ ಧೈರ್ಯವೆಂದು ಹೇಳ ಲಾಗದು.

---

## ೩ನೇ ಅಧ್ಯಾಯ

### ರಾಯದುರ್ಗದಲ್ಲಿ ವ್ಯಾಸಂಗ.

ಪೂನೆಯಲ್ಲಿ ಅಖಂಡರಾಜ್ಯಭಾರವನ್ನು ಮಾಡುತ್ತಾ ಇದ್ದ ಪೇಶ್ವೆಬಾಜಿರಾಯರ ಸಭೆಯಲ್ಲಿ ಅನೇಕಜನ ಮಹಾ ಪಂಡಿತರು ಆಸರೆಯನ್ನುಪಡೆದು ಆಸ್ಥಾನವನ್ನು ಅಲಂಕರಿ ಸುತಾ ಇದ್ದರು. ಇವರಲ್ಲಿ ಭಟ್ಟೋಜಿದೀಕ್ಷಿತರು, ನಾಗೋಜಿ ದೀಕ್ಷಿತರು, ಪುರುಷೋತ್ತಮಶಾಸ್ತ್ರಿಗಳು, ತ್ರಿಯಂಬಕಶಾಸ್ತ್ರಿ ಗಳು, ತ್ರಿವಿಕ್ರಮಶಾಸ್ತ್ರಿಗಳು, ಇವರೇ ಮೊದಲಾಗಿ ಅನೇ ಕರು ಪೇಶ್ವೆಯ ಆಸ್ಥಾನದಲ್ಲಿದ್ದ ದಿಗ್ದಂತಿಗಳು. ಪೇಶ್ವೆಗಳು ಜಾತಿಯಲ್ಲಿ ಬ್ರಾಹ್ಮಣರು. ಸ್ವಯಂಪಂಡಿತರು. ಪ್ರತಿ ವರು ಷವೂ ಶ್ರಾವಣಮಾಸದಲ್ಲಿ ಶ್ರಾವಣಿಪಾರಿ ಎಂದು ಒಂದು ಮಹಾವಿದ್ವತ್ಸಭೆಯನ್ನು ಮಾಡಿಸುತಾ ಇದ್ದರು. ಇದಕ್ಕೆ ದೇಶಾಂತರಗಳಿಂದ ಅನೇಕಜನ ಪಂಡಿತರು ಬಂದು ವಾಕ್ಯಾ ರ್ಥಗಳನ್ನು ಮಾಡಿ, ತಂತಮ್ಮ ಪಾಂಡಿತ್ಯವನ್ನು ತೋರಿಸಿ, ವಿಶೇಷವಾದ ಬಹುಮಾನಗಳನ್ನು ಪಡೆದು ಹೋಗುತ್ತಾ ಇದ್ದ ರು. ಪೇಶ್ವೆಯ ಅವಲಂಬನವನ್ನು ಹೊಂದಿ ಅನೇಕರು ಪೂನೆ

ಯಲ್ಲಿಯೇ ನಿಲ್ಲುತ್ತಲೂ ಇದ್ದರು. ಇಂಥವರಲ್ಲಿ ತ್ರಿಯಂಬಕ ಶಾಸ್ತ್ರಿಗಳು ರತ್ನಪ್ರಾಯರಾಗಿದ್ದರು. ಇವರು ಬರೆದ ಅನೇಕ ಗ್ರಂಥಗಳಲ್ಲಿ ಭಾಷ್ಯಭಾಸುಪ್ರಭಾ ಎಂಬುವ ಅದ್ವೈತ ಗ್ರಂಥವು ಲೋಕೋಪಕಾರವಾದ್ದು. ಇವರ ಖ್ಯಾತಿಯು ಎಲ್ಲಿಯೂ ಹರಡಿಕೊಂಡಿತ್ತು. ಇವರ ಸ್ಥಳವು ಬಳ್ಳಾರಿಜಿಲ್ಲಾ ಕಲ್ಯಾಣದುರ್ಗವೆಂಬ ಊರಾಗಿದೆ. ಅಲ್ಲಿ ಇವರಿಗೆ ವೃತ್ತಿ ಮೊದಲಾದ್ದು ಹೇರಳವಾಗಿ ಉಂಟು. ಇವರ ಪಾಂಡಿತ್ಯಕ್ಕೆ ಸಾಟಿಯೇ ಇರಲಿಲ್ಲ. ಇವರಲ್ಲಿ ಅನೇಕಜನ ಶಿಷ್ಯರು ಓದುತ್ತಾ ಇದ್ದರು. ಇವರು ಒಂದು ದಿಂಬನ್ನು ಒರಗಿಕೊಂಡು ಹಗಲು ರಾತ್ರೆ ಎನ್ನದೆ ಯಾವಾಗಲೂ ಕೂತೇ ಇರುತ್ತಾ, ಯಾವಾಗಲೂ ಪುಸ್ತಕವನ್ನು ನೋಡುತ್ತಾ, ಮಧ್ಯೆಮಧ್ಯೆ ಬರೆಯುತ್ತಾ ಇರುತಿದ್ದರು; ಯಾವಾಗಲಾದರೂ ಸ್ವಲ್ಪ ನಿದ್ರೆ ಬಂದರೆ ಅರೆಗಳಿಗೆ ದಿಂಬನ್ನು ಒರಗಿಕೊಂಡು ಕೂತುಕೊಂಡೇ ಆ ಜಡರನ್ನು ಕಳೆದು ಪುನಃ ಪುಸ್ತಕ ನೋಡುವುದು ಬರೆಯುವುದು ಹೀಗೆಮಾಡುತಾ ಇರುತಿದ್ದರು. ಇವರು ಮೈಸೂರಿಗೆ ಮೊದಲುಸಾರಿ ಬಂದು ಕೃಷ್ಣರಾಜ ಒಡೆಯರವರ ಭೇಟಿಮಾಡಿಕೊಂಡರು. ಅವರಿಗೂ ಈ ಸಂಸ್ಥಾನದ ಪಂಡಿತರಿಗೂ ವಾಕ್ಯಾರ್ಥವಾಗಬೇಕೆಂದು ನಿಷ್ಕರ್ಷೆಯಾಯಿತು. ಆಗ್ಗೆ ರಾಜಸಭೆಯಲ್ಲಿ ಮಹಾಪಂಡಿತರೆನ್ನಿಸಿಕೊಂಡಿದ್ದ

ರಾಮಶೇಷಶಾಸ್ತ್ರಿಗಳು ತ್ರಿಯಂಬಕಶಾಸ್ತ್ರಿಗಳೊಡನೆ ಶಾಸ್ತ್ರಾರ್ಥಕ್ಕೆ ಸಿದ್ಧರಾದರು.

ಈ ರಾಮಶೇಷಶಾಸ್ತ್ರಿಗಳ ವಿದ್ವತ್ತಿಗೆ ಕೊನೆಯೇ ಇರಲಿಲ್ಲವಂತೆ. ಇವರು ಕಣಿವೇ ಕೆಳಗಿನ ದ್ರಾವಿಡ ಸಂಪ್ರದಾಯದ ಸ್ಮಾರ್ತ ಬ್ರಾಹ್ಮಣರು. ಈ ಪಂಡಿತರು ಮೈಸೂರಿಗೆ ಬಂದು ಅರಮನೆಯಲ್ಲಿ ಹೆಚ್ಚಾದ ಬಹುಮಾನಗಳನ್ನೂ ಜಹಗೀರನ್ನೂ ಹೊಂದಿ ಗೌರವಶಾಲಿಗಳಾಗಿದ್ದರು. ಕೃಷ್ಣರಾಜ ಒಡೆಯರವರಿಗೆ ಇವರಲ್ಲಿ ಬಹುವಾಗಿ ಮರ್‍ಯಾದೆ ಇತ್ತು. ಇವರು ಉಚ್ಛಿಷ್ಟಗಣಪತಿಯ ಉಪಾಸಕರೆಂತಲೂ, ವಿಶೇಷವಾಗಿ ಪ್ರತಿಭೆಯುಳ್ಳವರೆಂತಲೂ ತಿಳಿಯಬರುತ್ತೆ. ಹೆಚ್ಚಾದ ಬುದ್ಧಿಶಕ್ತಿಗೂ ವಕ್ರವಾದ ಬಹಿಶ್ಚರ್‍ಯಕ್ಕೂ ಸಂಬಂಧವಿರುವಂತೆ ಕಾಣುತ್ತೆ. ಹಸುವಿಗೆ ಒಂದು ಹೊರೆಹುಲ್ಲನ್ನು ಕೊಂಡುಕೊಂಡು, ಅದನ್ನು ತಲೆಯಮೇಲೆ ಹೊತ್ತುಕೊಂಡು, ಕೈಯಲ್ಲಿ ಹತ್ತುಸೇರಿನ ತುಗರೀಬೇಳೆಯ ಗಂಟನ್ನು ಹಿಡಿದು, ರಾಮಶೇಷಶಾಸ್ತ್ರಿಗಳು ಮೈಸೂರ ಕಲ್ಯಾಣೀ ಮೈದಾನದಲ್ಲಿ ಬರುತಾ, ಇನ್ನೊಬ್ಬ ದೊಡ್ಡಪಂಡಿತರಾದ ಆನವಟ್ಟಿ ಶ್ರೀನಿವಾಸಾಚಾರ್‍ಯರನ್ನು ಕಂಡು ಅವರ ಸಂಗಡ ಹಗಲು ೯ ಗಂಟೆಯಿಂದ ಸಾಯಂಕಾಲ ೪ ಗಂಟೆಯವರೆಗೂ ಆ ಭಾರವನ್ನು ಹೊತ್ತುಕೊಂಡೇ ನಿಂತು ಶಾಸ್ತ್ರವಿಚಾರವಾಗಿ ಮಾತ

ನಾಡುತಾ ಇದ್ದರಂತೆ. ಇದು ಆಗಲೇ ದೊರೆಗಳಿಗೆ ತಿಳಿಯಿತು. ಅವರು ಅರಮನೆಯ ಚನೇ ಉಪ್ಪರಿಗೆಯಿಂದ ದುರ್ಬೀನನ್ನು ಹಾಕಿಕೊಂಡು ನೋಡುತ್ತಾ ಇದ್ದು, ಕೊನೆಗೆ ಬಹಳ ಹೊತ್ತಿನಿಂದ ನಿಂತು ಇದ್ದೀರಿ, ಕಾಲು ನೋಯುವುದಿಲ್ಲವೆ? ಎಂದು ಕಟ್ಟೆಗೆಯವರ ಮೂಲಕ ಶಾಸ್ತ್ರಿಗಳಿಗೆ ಹೇಳಿ ಕಳುಹಿಸಿದರು.

ಇನ್ನೊಂದುವೇಳೆ ದೊರೆಗೆ ವರ್ಷ ವರ್ಧಂತಿಯಾಗಲು, ಆ ದಿನ ಹಗಲು ಫಲಮಂತ್ರಾಕ್ಷತೆಯನ್ನೂ ಹುವ್ವಿನಹಾರವನ್ನೂ ತೆಗೆದುಕೊಂಡು ರಾಮಶೇಷಶಾಸ್ತ್ರಿಗಳು ಅರಮನೆಗೆ ಹೋದರು. ಇವರು ಹೋಗುವುದು ಹೊತ್ತಾಯಿತು. ಅದುವರೆಗೆ ದರಬಾರೆಲ್ಲಾ ಮುಗಿದು ರಾಜರ ಸವಾರಿಯು ಅಂಬಾವಿಲಾಸಕ್ಕೆ ದಯಮಾಡಿಸಿತ್ತು. ಈ ಶಾಸ್ತ್ರಿಗಳು ಅಂಬಾವಿಲಾಸದ ಬಾಗಿಲಿಗೆ ಹೋದರು. ಬಾಗಿಲು ಹಾಕಿತ್ತು. ಒಳಕ್ಕೆ ಯಾರನ್ನೂ ಬಿಡುವುದಿಲ್ಲವೆಂದು ಪಹರೇದವರು ತಡೆದರು. ಆ ಶಾಸ್ತ್ರಿಗಳು ತಮ್ಮ ಕೈಲಿದ್ದ ಹುವ್ವಿನಹಾರವನ್ನು ಅಲ್ಲಿದ್ದ ಒಬ್ಬ ಸಿಪಾಯಿಯ ಕೊರಳಿಗೆಹಾಕಿ, ಅವನ ಕೈಗೆ ಫಲಮಂತ್ರಾಕ್ಷತೆಯನ್ನು ಕೊಟ್ಟು ಹೊರಟುಹೋದರು. ಈ ಸಂಗತಿ ದೊರೆಗೆ ತಿಳಿಯಿತು. ಮರುದಿವಸ ಶಾಸ್ತ್ರಿಗಳು ಅರಮನೆಗೆ ಬಂದಾಗ ಅವರನ್ನು ಕುರಿತು ಪ್ರಭುಗಳು—ನಿನ್ನೆ ತಾವು

ದಯಮಾಡಿಸಿದ್ದಿರಂತೆ, ನಾನು ಇರಲಿಲ್ಲ. ನನಗಾಗಿ ತಾವು ತಂದು ಇದ್ದ ಹುವ್ವಿನ ಹಾರವನ್ನು ಸಿಪಾಯಿಗೆ ಹಾಕಿ ಅವನಿಗೆ ಫಲ ಮಂತ್ರಾಕ್ಷತೆಯನ್ನು ಕೊಟ್ಟ ಸಂಗತಿ ಗೊತ್ತಾಯಿತು, ಎಂದು ನಗುತ್ತಾ ಹೇಳಿದರು. ಅದಕ್ಕೆ ಶಾಸ್ತ್ರಿಗಳು—ಪ್ರಭುವೇ, ಇದಕ್ಕೆ ಆಕ್ಷೇಪಣೆಯೇನಿದೆ? ನಿಮ್ಮ ಬಿರುದನ್ನು ಸಿಪಾಯಿಯು ಧರಿಸಿ ನಿಮ್ಮ ಅಧಿಕಾರಲಾಂಛನವನ್ನು ಹೊಂದಿದ್ದ ಕಾರಣ, ತಮ್ಮ ಪ್ರತಿನಿಧಿಯಾದ ಅವನಿಗೆ ಮರ್ಯಾದೆ ಮಾಡಿದರೆ ತಮಗೆ ಮಾಡಿದ ಹಾಗೆಯೇ ಆಯಿತು, ಎಂದು ಉತ್ತರ ಹೇಳಿದರು. ಇದನ್ನು ಕೇಳಿ ದೊರೆಯು ಸುಮ್ಮನಾದರು. ಅದುವರೆಗೆ ಇವರಮೇಲೆ ಚಾಡೀ ಹೇಳಿದ್ದವರ ಮುಖ ಚಿಕ್ಕದಾಯಿತು.

ಇನ್ನೊಂದು ಸಮಯದಲ್ಲಿ ಈ ಶಾಸ್ತ್ರಿಗಳು ಅದೇ ಅಂಬಾವಿಲಾಸದ ತೊಟ್ಟಿಯಿಂದ ಹೊರಕ್ಕೆ ಬರುವಾಗ್ಗೆ ಒಬ್ಬ ಬಿಚ್ಚುಕತ್ತಿಯ ಕಾವಲುಗಾರನು—ಸ್ವಾಮಿ, ಶಾಸ್ತ್ರಿಗಳೆ, ನನ್ನ ಹೆಸರಬಲಕ್ಕೆ ಹೇಗೆ ಇದೆ ಎಂದನು. ಅದಕ್ಕೆ ಶಾಸ್ತ್ರಿಗಳು—ನಮ್ಮನ್ನು ಏನೆಂದು ಈ ಸ್ವಲ್ಪ ವಿಷಯಕುರಿತು ಕೇಳುತೀಯೆ? ನಮಗೆ ತಿಳಿಯದು. ಯಾರಾದರೂ ಜೋಯಿಸರು ಬಂದರೆ ಕೇಳಿಕೊ, ಎಂದರು. ಕೂಡಲೆ ಆ ಕಾವಲುಗಾರನು—ಏನು ಸ್ವಾಮಿ, ಇಷ್ಟು ದೊಡ್ಡ

ಶಾಸ್ತ್ರಿಗಳಾಗಿದ್ದೀರಿ, ಹೆಸರಬಲಕ್ಕೆ ಹೇಳಲಾರಿರಿ, ಎಂದನು. ಆ ವಿದ್ವಾಂಸರು ಆಗ ಸುಮ್ಮನೆ ಹೊರಟುಹೋದರು. ನಾಲ್ಕಾರು ದಿವಸದಮೇಲೆ ಆ ಕಾವಲುಗಾರನು ಕತ್ತಿ ಹಿಡಿದುಕೊಂಡು ನಿಂತು ಪಹರೆ ಕಾಯುತ್ತಾ ಇರುವಾಗ, ರಾಮಶೇಷಶಾಸ್ತ್ರಿಗಳು ತಲೆಗೆ ಬಹಿರ್ವಾಸವನ್ನು ಸುತ್ತಿ ಕಿವಿಗೆ ಜನಿವಾರವನ್ನು ಸುತ್ತಿಕೊಂಡು ಕೈಯಲ್ಲಿ ಬಿಸಿನೀರಿನ ತಂಬಿಗೆಯನ್ನು ಹಿಡಿದು ಅಂಬಾವಿಲಾಸದ ಬಾಗಿಲಿಗೆ ಬಂದರು. ಅಲ್ಲಿದ್ದ ಬಿಚ್ಚುಕತ್ತಿಯವನನ್ನು ಕಂಡು ಕೂತುಕೊಂಡು—ಬಾರೈ ನನಗೆ ಕ್ಷೌರಮಾಡು ಎಂದರು. ಅದಕ್ಕೆ ಅವನು—ಸ್ವಾಮಿ ತಾವು ದೊಡ್ಡವರು, ನನಗೆ ಹೀಗೆ ಅಪಮಾನ ಮಾಡಬಾರದು. ನಾನು ಕ್ಷೌರದವನೆ? ಎಂದನು. ಆಗ ಶಾಸ್ತ್ರಿಗಳು—ನೀನು ಹೆಸರಬಲಕ್ಕೆ ಕೇಳಲಾಗಿ, ಆ ದಿವಸ ನಾನು — ಜೋಯಿಸರನ್ನು ಕೇಳು ಎಂದು ಹೇಳಿದ್ದಕ್ಕೆ, ನೀವು ದೊಡ್ಡವರು ಇಷ್ಟುಮಾತ್ರ ತಿಳಿಯಲಿಲ್ಲವೆ? ಎಂದೆ. ನೀನು ಇಷ್ಟು ಉದ್ದವಾದ ಕತ್ತಿಯನ್ನು ಹಿಡಿದು ಇದ್ದೀಯೆ, ಕ್ಷೌರಮಾಡಲಾರೆಯಾ? ಎಂದರು. ಈ ಸಂಗತಿ ಕೂಡಲೆ ದೊರೆಗೆ ವರದಿಯಾಯಿತು. ಸವಾರಿಯು ಅಲ್ಲಿಗೆ ಬಂತು. ಪ್ರಭುವು ಇದನ್ನು ನೋಡಿ ನಕ್ಕು—ಮಹಾತ್ಮರ ಸಂಗಡ ಹೆಚ್ಚಿನ ಮಾತನಾಡಿದ್ದು ಆ ಬಿಚ್ಚುಕತ್ತೀ ಪಹರೆಯವನ

ತಪ್ಪೆಂದು ಹೇಳಿ ಅವನನ್ನು ದಂಡಿಸಿ, ಬುದ್ಧಿ ಹೇಳಿದರು.

ಕೃಷ್ಣರಾಜ ಒಡೆಯರವರು ಕೆಲವು ದಿವಸ ಔಪಾಸನವನ್ನು ಮಾಡುತಾ ಇದ್ದರು. ರಾಣಿವಾಸದ ಒಬ್ಬ ಹೆಂಡತಿಯು ಬಹಿಷ್ಟರಾದರು. ಆಗ ಔಪಾಸನವನ್ನು ಮಾಡಬಹುದೇ ಎಂಬ ಸಂಶಯ ಹುಟ್ಟಿತು. ರಾಮಶೇಷಶಾಸ್ತ್ರಿಗಳನ್ನು ಕೇಳಿಕೊಂಡು ಬರಲು ರಾಜರ ಅಪ್ಪಣೆಯಾಯಿತು. ಶಾಸ್ತ್ರಿಗಳು ಮನೆಯಲ್ಲಿ ಊಟದೆಲೆಯನ್ನು ಹಚ್ಚಿಸುತಾ ಬಿಸಿಲನ್ನು ಕಾಸಿಕೊಳ್ಳುತಾ ಕೂತಿದ್ದರು. ಹರಿಕಾರ ಬಂದು ದೊರೆಗಳ ಅಪ್ಪಣೆಯಾದ ಸಂಗತಿಯನ್ನು ಶಾಸ್ತ್ರಿಗಳಿಗೆ ಹೇಳಿದನು. ಅವರು ಮಾತನಾಡದೆ ಸುಮ್ಮನಿದ್ದರು. ಮತ್ತೊಬ್ಬ ಹರಿಕಾರ ಬಂದು ಕೈಮುಗಿದು ಶಾಸ್ತ್ರಿಗಳ ಮುಂದೆ ನಿಂತುಕೊಂಡ; ಆದರೂ ಮಾತನಾಡಲಿಲ್ಲ. ಪುನಃ ಒಬ್ಬ ಕಟ್ಟಿಗೆಯವನೂ ತರುವಾಯ ಇನ್ನೊಬ್ಬನೂ ಬಂದರು. ಯಾರಿಗೂ ಶಾಸ್ತ್ರಿಗಳು ಉತ್ತರ ಹೇಳಲಿಲ್ಲ. ಅವರೆಲ್ಲರೂ ಸೇರಿ —ಆರೋಗಣೆಗೆ ಹೊತ್ತಾಯಿತು, ಉತ್ತರವೇನು? ಅಪ್ಪಣೆ ಏನು? ಎಂದರು. ಈ ದೊರೆಯು ಹೆಂಡತಿ ಮುಟ್ಟಾಗದಿದ್ದಾಗ್ಯೂ ಔಪಾಸನ ಮಾಡಬಹುದೆಂದು ಎಲ್ಲಿ ಹೇಳಿದೆಯೋ ಮುಟ್ಟಾದರೂ ಮಾಡಬಹುದೆಂದು ಅಲ್ಲಿಯೇ ಹೇಳಿದೆ. ಮಾಡಿದರೂ ಒಂದೇ ಮಾಡದೇ ಇದ್ದರೂ ಒಂದೇ, ಎಂದು

ಶಾಸ್ತ್ರಿಗಳು ಕೋಪದಿಂದ ಗಟ್ಟಿಯಾಗಿ ಕೂಗಿ ಹೇಳಿದರು. ಆ ಹರಿಕಾರರೂ ಕಟ್ಟಿಗೆಯವರೂ ಹೋಗಿ ದೊರೆಯಲ್ಲಿ ಆ ಉತ್ತರವನ್ನು ಹೇಳಿದರು. ಇದನ್ನು ಕೇಳಿದೊಡನೆಯೇ ಪ್ರಭುವು ಶಾಸ್ತ್ರಿಗಳಮೇಲೆ ಕೋಪಮಾಡಿಕೊಳ್ಳದೆ, ಅವರ ಅಪ್ಪಣೆಯೇ ನಮಗೆ ಮಹಾಪ್ರಸಾದವೆಂದು ಹೇಳಿ ಆ ದಿನ ಮೊದಲ್ಗೊಂಡು ಔಪಾಸನಮಾಡುವುದನ್ನು ಬಿಟ್ಟುಬಿಟ್ಟರು.

ಈ ರಾಮಶೇಷಶಾಸ್ತ್ರಿಗಳ ಅಪರಿಮಿತವಾದ ಯೋಗ್ಯತೆಯನ್ನು ತೋರಿಸತಕ್ಕ ಇನ್ನೊಂದು ಸಂಗತಿ ನಡೆಯಿತು. ಇವರು ಒಂದುಸಾರಿ ತಿರುಚನಾಪಳ್ಳಿಗೆ ಹೋಗಿದ್ದರು. ನಿರ್ಮಾನುಷ್ಯವಾಗಿದ್ದ ಕಡೆ ದಿನದಿನವೂ ಸ್ನಾನಕ್ಕೆ ಹೋಗಿ ಸಾವಕಾಶವಾಗಿ ಆಹ್ನಿಕವನ್ನು ಮಾಡಿಕೊಂಡು ಬರುತಾ ಇದ್ದರು. ಕಾವೇರೀ ನದಿಯ ಆ ಕಡುವಿನಲ್ಲಿ ಒಂದು ದಿನ ಇವರು ಸ್ನಾನಮಾಡಿ ಜಪಮಾಡುತಾ ಕೂತಿದ್ದರು. ಪೂರ್ವದಲ್ಲಿ ಕಂಪನಿ ಸರ್ಕಾರದವರಕಡೆ ಕೊಂಚ ಜನರ ಸೇನೆ ತಿರುಚನಾಪಳ್ಳಿಯಲ್ಲಿ ಠಾಣ್ಯವಾಗಿತ್ತು. ಅವರಲ್ಲಿ ಇಬ್ಬರು ಸೋಳ್ಜರು ಆ ಕಡುವಿಗೆ ಬಂದು ಬಟ್ಟೆಯನ್ನು ತೆಗೆದು ನೀರಿಗೆಬಿದ್ದು ಈಜಾಡುತಾ ಜಗಳವಾಡಿದರು. ಒಬ್ಬೊಬ್ಬರು ಬೈದಾಡಿ ಹೊಡೆದಾಡಿ ಮುಖ ಮೈಯೆಲ್ಲಾ ರಕ್ತಮಯವಾಯಿತು. ಇವರಿಬ್ಬರೂ ಹೊಗಿ ತಮ್ಮ ಕರ್ನಲ್ ಎಂಬ ಸೇನಾಪತಿಯಲ್ಲಿ

ದೂರು ಹೇಳಿಕೊಂಡರು. ಆತನು ಸಾಕ್ಷಿಯಾರೆಂದು ಕೇಳಲು ಆ ಸೋಲ್‌ಜರು—ಒಬ್ಬ ಬ್ರಾಹ್ಮಣ ಸ್ವಲ್ಪದೂರದಲ್ಲಿ ಸುಮ್ಮನೆ ಬೂದೀ ಬಳಿದುಕೊಂಡು ಕೂತಿದ್ದ, ಎಂದು ರಾಮಶೇಷ ಶಾಸ್ತ್ರಿಗಳನ್ನು ಸಾಕ್ಷಿಯಾಗಿ ಕೋರಿದರು. ಇವರನ್ನು ಗೊತ್ತು ಮಾಡಿಕೊಂಡು ಕರಿಸಿ ಆ ಅಧಿಕಾರಿಯು ವಿಚಾರಿಸಿದನು. ಶಾಸ್ತ್ರಿಗಳು — ನಾನು ಒಂದನ್ನೂ ಅರಿಯೆ, ಈ ಇಬ್ಬರು ಸೋಲ್‌ಜರುಗಳೂ ಕೋಪದಿಂದ ಕೂಗಾಡುತಾ ಇದ್ದರು. ನನಗೆ ಅವರ ಮಾತು ಬಾರದು; ಇವರಿವರು ಆಡಿದ ಮಾತಿನ ಶಬ್ದವನ್ನು ನಾನು ಉಚ್ಚರಿಸಿ ಹೇಳಬಲ್ಲೆ ಎಂದು ಇವನಿವನು ಈ ಈ ಶಬ್ದವನ್ನು ಉಚ್ಚರಿಸಿದ ಎಂಬದಾಗಿ ಆದ್ಯಂತವಾಗಿ ಹೇಳಿದರು. ಈ ಮಾತಿಗೆ ಆ ಸೋಲ್‌ಜರುಗಳು ಒಪ್ಪಿದರು. ಈ ಶಾಸ್ತ್ರಿಗಳ ಸಾಮರ್ಥ್ಯಕ್ಕೆ ಅಧಿಕಾರಿ ಆಶ್ಚರ್ಯಪಟ್ಟನು. ಆದರೆ ಇವರಿಗೆ ಇಂಗ್ಲಿಷ್‌ಭಾಷೆ ಬಾರದೆಂಬುವುದನ್ನು ಅಧಿಕಾರಿ ನಂಬಲಿಲ್ಲ. ಇವರನ್ನು ಪರೀಕ್ಷಿಸಲು ಚಿಕ್ಕದಾಗಿ ಒಂದು ಸಭೆ ಸೇರಿತು. ಒಂದುಸಾರಿ ಕೇಳಿದ ಮಾತ್ರಕ್ಕೇ ಸ್ವಲ್ಪವೂ ಬಿಡದೆ ಪುನಃ ಅದೆಲ್ಲವನ್ನೂ ತಾವು ಉಚ್ಚರಿಸಿ ಹೇಳಲು ಈ ಪಂಡಿತರು ಒಪ್ಪಿದರು. ಆ ಜಿಲ್ಲಾ ಕಲೆಕ್ಟರು ಸಾಹೇಬನು ತನ್ನ ಮನೇ ಪೆಟ್ಟಿಗೆಯಲ್ಲಿದ್ದ ಒಂದು ಹಳೇ ಇಂಗ್ಲಿಷ್ ಪುಸ್ತಕ, ಒಂದು ಲ್ಯಾಟಿನ

ಭಾಷೆಯ ಪುಸ್ತಕ ಇವರೆಡರಲ್ಲಿಯೂ ಒಂದೊಂದು ಪುಟ ಓದಿ ನಿಲ್ಲಿಸಿದಕೂಡಲೆ ಅದೆಲ್ಲವನ್ನೂ ಪೂರ್ತಿಯಾಗಿ ಲೇಶವೂ ಬಿಡದೆ ರಾಮಶೇಷಶಾಸ್ತ್ರಿಗಳು ಉಚ್ಚರಿಸಿ ಹೇಳಿದರಂತೆ. ಆ ಸಭೆಯೆಲ್ಲಾ ಆಶ್ಚರ್ಯದಲ್ಲಿ ಮುಳುಗಿಹೋಯಿತು.

ಇವರ ಅದ್ಭುತವಾದ ಸಾಮರ್ಥ್ಯವನ್ನು ಕುರಿತು ಹೇಳಲು ಸ್ಥಳಯಾವುದೂ ಇಲ್ಲದೆ ಎಲ್ಲರಿಗೂ ತಿಳಿಯಲೆಂದು ಇಲ್ಲಿ ಬರೆದಿದೆ. ಇವರ ವಿಷಯವಾಗಿ ಮೇಲೆ ಬರೆದಿರುವ ಉಪಕಥೆಗಳಿಂದ ನಮ್ಮ ಕೃಷ್ಣರಾಜ ಪ್ರಭುಗಳ ಯೋಗ್ಯತೆಯು ಪ್ರಕಾಶಕ್ಕೆ ಬರುತ್ತೆ. ದೊರೆಯು ಬಹು ವಿಷಯಗಳನ್ನು ಕೇಳಿ ಎಷ್ಟು ಪ್ರಜ್ಞೆಯುಳ್ಳವರಾಗಿದ್ದಾಗ್ಯೂ, ಲೇಶವೂ ಅಹಂಕಾರಪಡುತಾ ಇರಲಿಲ್ಲ. ಸಮಯಬಂದರೆ ಎಲ್ಲರ ಸಂಗಡಲೂ ಗರ್ವವಿಲ್ಲದೆ ಮಾತನಾಡುತಾ ಇದ್ದರು. ಪಂಡಿತರುಗಳಲ್ಲಿ ವಿಶೇಷವಾದ ಭಕ್ತಿಯನ್ನು ಇರಿಸಿಕೊಂಡು ಅವರನ್ನು ಲೇಶವೂ ನೋಯಿಸದೆ ಅವರಿಗೆ ಬೇಕಾದ್ದನ್ನು ಕೊಟ್ಟು ಕಾಪಾಡುತಾ ಇದ್ದರು. ಅಯ್ಯೋ ಗುಣನಿಧಿಯಾದ ದೊರೆಯೆ! ಕಾಲಯಮನು ತನ್ನ ಪಾಶಕ್ಕೆ ನಿನ್ನನ್ನು ಯಾಕೆ ಗುರಿಮಾಡಿದ!

ಈ ಮೇಲೆ ಕಂಡ ರಾಮಶೇಷಶಾಸ್ತ್ರಿಗಳು ರಾಜಸಭೆಯಲ್ಲಿ ತ್ರಿಯಂಬಕಶಾಸ್ತ್ರಿಗಳನ್ನು ನೋಡಿ ತ್ರಿಯಂಬಕ ಎಂಬ

ಶಬ್ದದಮೇಲೆಯೇ ವಿಶೇಷವಾಗಿ ಚರ್ಚೆಮಾಡಿ ಕೋಟಿಗಳನ್ನು ಏರಿಸಿದರಂತೆ. ಏವಂಚ ಕೃಷ್ಣರಾಜ ಒಡೆಯರು ತ್ರಿಯಂಬಕಶಾಸ್ತ್ರಿಗಳ ಅನುಪಮವಾದ ಪಾಂಡಿತ್ಯಕ್ಕೆ ಹೆಚ್ಚಾದ ಬಹುಮಾನವನ್ನು ಮಾಡಿದ ಸಂಗತಿಯೇನೋ ನಿಶ್ಚಯವೆಂದು ಕಂಡುಬರುತ್ತೆ.

ಇಂಥಾ ತ್ರಿಯಂಬಕಶಾಸ್ತ್ರಿಗಳ ಪಾಂಡಿತ್ಯದ ಪ್ರಭಾವವನ್ನು ಕೇಳಿ ರಾಮನು ಪರವಶನಾಗಿ ಇಂಥವರಲ್ಲಿ ತಾನು ಶಿಷ್ಯನಾಗಿದ್ದರೆ ಸಾಕೆಂದು ಎಣಿಸಿ, ಮೈಸೂರನ್ನು ಬಿಟ್ಟು ಕಲ್ಯಾಣದುರ್ಗಕ್ಕೆ ಬಂದು ತ್ರಿಯಂಬಕಶಾಸ್ತ್ರಿಗಳ ದರ್ಶನ ಮಾಡಿಕೊಂಡು ಅವರ ಶಿಷ್ಯಕೋಟಿಗೆ ಸೇರಿಕೊಂಡನು.

ಪೂರ್ವಕಾಲದಲ್ಲಿ ವಿದ್ಯಾಭ್ಯಾಸಕ್ರಮವು ಈಗ ಇರುವ ಹಾಗೆ ಇರಲಿಲ್ಲ. ಈಗಿನ ಸ್ಕೂಲುಗಳು, ಕಾಲೇಜುಗಳು, ಯುನಿವರ್ಸಿಟಿಗಳು, ಎಂಬ ಬಗೆಬಗೆ ವಿದ್ಯಾವೈಖರಿಯ ಸಂಸ್ಥಾಪಗಳು ಇರಲಿಲ್ಲ. ಮಾಸ್ಟರುಗಳು ಪ್ರೊಫೆಸರುಗಳು ಎಂಬ ಹೆಸರುಗಳನ್ನು ಯಾರೂ ಅರಿಯರು. ವಿದ್ಯಾಭ್ಯಾಸದ ಇಲಾಖೆ ಎಂದು ಯಾವ ಸರ್ಕಾರಿ ಇಲಾಖೆಯೂ ಏರ್ಪಾಡಾಗಿರಲಿಲ್ಲ. ಸರ್ಕಾರದಿಂದ ವಿದ್ಯಾಭ್ಯಾಸಕ್ಕಾಗಿ ನಿಗದಿಯಾದ ಹಣವೇನೂ ವೆಚ್ಚವಾಗುತಾ ಇರಲಿಲ್ಲ. ಇದಕ್ಕೆ ಬದಲಾಗಿ ಗ್ರಾಮಗಳಲ್ಲಿಯೂ ಪಟ್ಟಣಗಳಲ್ಲಿಯೂ ಧನಿಕ

ರಾದವರ ಮನೆಗಳಲ್ಲಿಯೂ ಬಾಲಕರಿಗೆ ಓನಾಮದಿಂದ ಮೊದಲುಮಾಡಿ ಕೊಟ್ಟಕಾಗದ ಓದುವುದು, ಹೇಳಿದ್ದನ್ನು ಬರೆಯುವುದು, ಟವಣೆಹಾಕುವುದು, ಕಳೆಯುವುದು, ಇಷ್ಟರ ಮಟ್ಟಿಗೆ ಕನ್ನಡದಲ್ಲಿ ಹೇಳಿಕೊಡುವ ಮಠಗಳನ್ನು ಇರಿಸಿದ್ದರು. ಈ ಮಠಗಳಲ್ಲಿ ಪುಸ್ತಕವೆಂದರೆ ಕನ್ನಡ ಕಾವ್ಯಗಳನ್ನು ಓದಿ ಗುಣಕಾರ ಭಾಗಾಹರ ಮಾಡುವಮಟ್ಟಿಗೆ ಕಲಿಸಿಕೊಡತಕ್ಕ ಉಪಾಧ್ಯಾಯನು ಬಹು ಘಟಕನೆಂದು ಹೆಸರನ್ನು ಪಡೆದಿದ್ದನು. ಇದೆಲ್ಲಾ ಬಾಲಕರ ವಿದ್ಯಾಭ್ಯಾಸ ಕ್ರಮದಲ್ಲಿ ಸೇರಿದ್ದಾಗಿತ್ತು. ಇಂಥಾ ಮಠಗಳಲ್ಲಿ ಬೋಧಿಸುತಾ ಇದ್ದ ಭಾಷೆಯು ದೇಶಭಾಷೆಯಾಗಿತ್ತು. ಇಂಥಾ ಉಪಾಧ್ಯಾಯರಿಗೆ ಹುಡುಗರ ತಂದೆತಾಯಿಗಳು ವರ್ಷಾಶನ ಅಥವ ಮಾಸಾಶನವನ್ನು ಕೊಡುತಾ ಇದ್ದರು. ನವರಾತ್ರೆಯಲ್ಲಿ ಆಶ್ವೀಜಮಾಸ ಒಂದು ತಿಂಗಳೂ ಹುಡುಗರಿಗೆ ಒಳ್ಳೇ ಉಡುಪನ್ನು ಹಾಕಿಸಿ ಅವರ ಕೈಯಲ್ಲಿ ಬಂಣದ ಕೋಲನ್ನು ಹಿಡಿಸಿಕೊಂಡು ಮುಖಂಡರಾದ ಜನರ ಮನೆಗಳಿಗೆ ಕರೆದುಕೊಂಡು ಹೋಗುತಾ, ಹುಡುಗರಿಂದ ಚೌಪದವೆಂಬ ಹಾಡುಗಳನ್ನು ಹಾಡಿಸುತಾ, ಉಪಾಧ್ಯಾಯರು ಜನರಿಗೆ ವಿನೋದವನ್ನು ಉಂಟುಮಾಡುತಿದ್ದರು. ಹುಡುಗರಿಗೆ ತಿಂಡಿಯನ್ನು ಕೊಡಿಸಿ ಉಪಾಧ್ಯಾಯರಿಗೆ ಉಚಿತವಾಗಿ ಹಣವನ್ನು ಕೊಡು

ತಿದ್ದರು. ಆದರೆ ಸಂಸ್ಕೃತ ವಿದ್ಯಾರ್ಥಿಗಳು ಸಾಹಿತ್ಯ ವ್ಯಾಕರಣ, ತರ್ಕ, ವೇದಾಂತ ಮೊದಲಾದ ಶಾಸ್ತ್ರಗಳಲ್ಲಿ ಪೂರ್ವಕಾಲದಲ್ಲಿದ್ದ ಅನೇಕ ದೊಡ್ಡಪಂಡಿತರುಗಳಿಂದ ಪಾಠವನ್ನು ಹೇಳಿಸಿಕೊಳ್ಳುತಾ ಇದ್ದರು. ಒಂದೊಂದು ಶಾಸ್ತ್ರದಲ್ಲಿ ವಿಶೇಷವಾಗಿ ವ್ಯಾಸಂಗವನ್ನುಮಾಡಿ ಜನರು ಮಹಾಪಂಡಿತರಾಗುತಾ ಇದ್ದರು. ಇಂಥಾ ಪಂಡಿತರಿಗೆ ಆಗಿದ್ದ ಆಸ್ತಿಕರಾದ ಅನೇಕ ರಾಜರುಗಳ ಅವಲಂಬನವು ದೊರೆಯುತಾ ಇತ್ತು. ರಾಜಸಭೆಗಳಲ್ಲಿ ನಡೆಯುವ ಶಾಸ್ತ್ರಾರ್ಥ ಪ್ರಸಂಗಗಳೇ ಪರೀಕ್ಷೆಗಳಾಗಿದ್ದವು. ರಾಜರು ಆ ವಿದ್ವಾಂಸರಿಗೆ ಪುಷ್ಕಳವಾಗಿ ಮಾಸಾಶನಗಳನ್ನೂ ವೃತ್ತಿ ಸ್ವಾಸ್ತ್ಯಗಳನ್ನೂ ಮಾಡಿಕೊಟ್ಟು ದಾರಿದ್ರ್ಯದ ಅಂಧಕಾರವು ಅವರನ್ನು ಕವಿಯದಹಾಗೆ ನೋಡಿಕೊಳ್ಳುತಾ ಇದ್ದದೂ ಅಲ್ಲದೆ, ಹೆಚ್ಚಿನ ವೈದುಷ್ಯವುದ್ಯೋತಕವಾಗುತಾ ಬಂದಾಗಲೆಲ್ಲಾ ಹೆಚ್ಚಾದ ಗೌರವವನ್ನೂ ಅಮೋಘವಾದ ಸಂಭಾವನೆಗಳನ್ನೂ ಕೊಡುತಾ ಇದ್ದರು. ಹೀಗೆ ಸುಖವಾಗಿದ್ದ ವಿದ್ವಾಂಸರು ತಂತಮ್ಮ ಮನೆಗಳಲ್ಲಿ ಅನೇಕ ಜನ ಶಿಷ್ಯರಿಗೆ ಬೇಕಾದ ಪಾಠಗಳನ್ನು ಹೇಳುತಾ ಇದ್ದರು. ವಿದ್ಯಾರ್ಥಿಗಳಿಂದ ಪಂಡಿತರುಗಳು ಯಾವ ಪ್ರತಿಫಲವನ್ನೂ ಅಪೇಕ್ಷಿಸುತ್ತಿರಲಿಲ್ಲ. ಮೇಲಾಗಿ ಶಿಷ್ಯರನ್ನು ತಮ್ಮ ಮನೆಯಲ್ಲಿಯೇ ಇರಿಸಿಕೊಂ

ು, ಅವರಿಗೆ ಅನ್ನವನ್ನು ಹಾಕಿ, ತಮ್ಮ ಮಕ್ಕಳನ್ನು
ಂಡಂತೆ ಕಾಪಾಡುತಾ ಇದ್ದಕಾರಣ ಶಿಷ್ಯರು ಗುರುವಿ
ಲ್ಲಿ ವಿಶೇಷವಾದ ಭಕ್ತಿಯನ್ನಿಟ್ಟುಕೊಂಡು, ಗುರುಕುಲವಾ
ವನ್ನು ಮಾಡುತಾ ಗುರುಶುಶ್ರೂಷೆಯಲ್ಲಿ ನಿರತರಾಗಿ ಇರು
ದ್ದರು. ಇಷ್ಟುವಿನಾ ಆಗಿನ ಪಂಡಿತರು ವಿದ್ಯಾದಾನವಾ
ುವುದಕ್ಕಾಗಿ ಅರಮನೆಯಿಂದಲಾಗಲಿ, ಶಿಷ್ಯರಿಂದಲಾಗಲಿ,
ದ್ರವ್ಯವನ್ನು ಸ್ವೀಕರಿಸುತಾ ಇರಲಿಲ್ಲ. ಅನ್ನವನ್ನೂ, ವಿ
ೖವನ್ನೂ, ಕನ್ಯವನ್ನೂ ಹಣಕ್ಕಾಗಿ ಮಾರುವುದು ಮಹಾ
ಾತಕಗಳಿಗೆ ಸಮಾನವೆಂದು ಭಾವಿಸಿಕೊಂಡಿದ್ದರು. ಸ
ರ್ಕಾರದವರು ಸ್ಕೂಲುಗಳನ್ನೂ ಕಾಲೇಜುಗಳನ್ನೂ ಏರ್ಪಾ
ುಮಾಡುವವರೆಗೂ ಈ ಕ್ರಮವೇ ಆಚರಣೆಯಲ್ಲಿತ್ತು.
ಪ್ರತಿ ಪಂಡಿತರ ಮನೆಯೂ ಉದ್ಗ್ರಂಥಗಳನ್ನು ಹೇಳುವ
ಂದೊಂದು ಕಾಲೇಜಾಗಿತ್ತು.

ಪೂರ್ವದಲ್ಲಿ ಎಂದು ನಾನು ಮೇಲೆ ಬರೆದೆ. ಇದರಿಂದ
ಯುಗಾಂತರದಲ್ಲಿ ಎಂದು ಅರ್ಥ ಮಾಡಿಕೊಳ್ಳಕೂಡದು.
ಈಗ್ಗೆ ಸುಮಾರು ೫೦ ವರುಷಗಳಹಿಂದೆ ಹೀಗೆ ಜರುಗುತಾ
ಇತ್ತು. ವಿದ್ಯಾಭ್ಯಾಸದಲ್ಲಿ ಈ ಕ್ರಮವು ಹಿಂದೂಸ್ಥಾ
ನದಲ್ಲಿ ಪೂರ್ವಾಚಾರವಾಗಿ ನಡೆದುಬಂತು. ಈಚೆಗೆ ಅನ್ಯ
ದೇಶಭಾಷೆಗಳನ್ನು ಬೋಧಿಸಲು ಆಗಿರುವ ಏರ್ಪಾಡಿನಲ್ಲಿ

ಈ ಧರ್ಮವು ವ್ಯತ್ಯಸ್ತವಾಯಿತು. ವಿದ್ಯಾರ್ಥಿಗಳು ಹಣವನ್ನು ಕೊಟ್ಟು ಪಾಠವನ್ನು ಓದುವುದು, ವಿದ್ವಾಂಸರು ಸರ್ಕಾರದಿಂದ ಸಂಬಳವನ್ನು ತೆಗೆದುಕೊಂಡು ಪಾಠಹೇಳುವುದು, ಗಂಟೆಗೆ ಒಬ್ಬ ವಿದ್ವಾಂಸನು ಬಂದು ತನಗೆ ಗೊತ್ತಾಗಿರುವ ಭಾಗದಲ್ಲಿ ಉಪನ್ಯಾಸಮಾಡಿ ಹೊರಟು ಹೋಗುವುದು, ವಿದ್ಯಾರ್ಥಿಗೆ ಹುಟ್ಟಿದ ಸಂಶಯವನ್ನು ಪರಿಚ್ಛೇದಮಾಡಿಕೊಡಲು ಉಪಾಧ್ಯಾಯನಿಗೆ ಅಕ್ಕರೆಯೂ ಸಹನವೂ ವ್ಯವಧಾನವೂ ಇಲ್ಲದೇ ಇರುವುದು, ಇದರಿಂದ ಗುರುವಿನಲ್ಲಿ ಶಿಷ್ಯನಿಗೆ ಭಕ್ತಿ ಕಡಮೆಯಾಗುವುದು, ಶಿಷ್ಯನಲ್ಲಿ ಗುರುವಿಗೆ ವಿಶ್ವಾಸವಿಲ್ಲದೇ ಇರುವುದು, ಕೊನೆಕೊನೆಗೆ ಗುರುವಿನ ಮಾತಿನಲ್ಲಿ ಶಿಷ್ಯನಿಗೆ ಯಾವ ಗೌರವವೂ ಇಲ್ಲದೆ ಶಿಷ್ಯನು ಗುರುವನ್ನು ದೂಷಣೆಮಾಡತಕ್ಕ ಪಾಪಕ್ಕೆ ಗುರಿಯಾಗುವುದು, ಇವೇ ಮೊದಲಾದ ಅನರ್ಥಗಳು ಸಂಭವಿಸುತಾ ಬಂದವು. ಸರ್ಕಾರದವರು ವಿದ್ಯಾರ್ಥಿಗಳಿಂದ ಹಣವನ್ನು ತೆಗೆದುಕೊಂಡು ವಿದ್ಯವನ್ನು ಹೇಳಿಸುತ್ತಾರೆಂಬ ಹೆಸರೊಂದಾಯಿತೇ ವಿನಾ, ಈ ಹಣದಿಂದ ಒಬ್ಬ ವಿದ್ವಾಂಸನ ಸಂಬಳವೂ ಏಳುವುದಿಲ್ಲ. ಸರ್ಕಾರಕ್ಕೆ ಖರ್ಚು ತಪ್ಪಲಿಲ್ಲ. ಶಿಷ್ಯನಿಗೆ ಗುರುವಿನಲ್ಲಿದ್ದ ಮರ್ಯಾದೆ ಮಾತ್ರ ತಪ್ಪಿಹೋಯಿತು. ವಿದ್ಯಾದಾನ ವಿಚಾರವಾಗಿ ಧರ್ಮಕ್ಕೂ

ಲೋಪವಾಯಿತು. ಪಾಶ್ಚಾತ್ಯರ ವಿದ್ಯಾಭ್ಯಾಸಕ್ರಮದಲ್ಲಿ ಈ ಬಗೆಯ ಲೋಪವಿದೆ.

ಈಗಿನ ಹೊಸರೀತಿಯು ನಮಗೆ ಪ್ರಕೃತವಾದ್ದಲ್ಲ. ನಮ್ಮ ಮಹಾ ಪಂಡಿತರು ಪೂರ್ವಾಚಾರವನ್ನೂ ವಿಧಿಯನ್ನೂ ಅನುಸರಿಸಿ ಅನ್ನದಾನಕ್ಕೂ ವಿದ್ಯಾದಾನಕ್ಕೂ ತಂತಮ್ಮ ಮನೆಯನ್ನೇ ಠೌರುಮನೆಯಾಗಿ ಮಾಡಿಕೊಂಡಿದ್ದರು. ಐದಂಪರ್ಯೇಣ ಮಹಾ ಪಂಡಿತರಾದ ತ್ರಿಯಂಬಕ ಶಾಸ್ತ್ರಿಗಳ ಮನೆಯಲ್ಲಿ ಅನೇಕ ಜನ ವಿದ್ಯಾರ್ಥಿಗಳು ಪಾಠವನ್ನು ಓದುತಾ ಇದ್ದರು.

ರಾಮಶಾಸ್ತ್ರಿಯು ರಾಯದುರ್ಗಕ್ಕೆ ಬಂದು ತ್ರಿಯಂಬಕ ಶಾಸ್ತ್ರಿಗಳನ್ನು ಕಂಡು ನಮಸ್ಕಾರಮಾಡಿ ತಾನು ಬಂದ ಕಾರ್ಯವನ್ನು ಅವರಿಗೆ ಅರಿಕೆಮಾಡಿದನು. ಈತನಿಗೆ ತರ್ಕದಲ್ಲಿ ಇನ್ನೂ ಬಾಲ್ಯಪಾಠವೇ ಆಗುತಾ ಇದ್ದ ಕಾರಣ, ಈತನಿಗೆ ಪಾಠಹೇಳಿಕೊಡಲು ತ್ರಿಯಂಬಕ ಶಾಸ್ತ್ರಿಗಳು ತಮ್ಮ ಮಗ ಬಾಪುಶಾಸ್ತ್ರಿಯಬಳಿಗೆ ಹೋಗೆಂದು ಕಳುಹಿಸಿದರು. ಈ ಬಾಪುಶಾಸ್ತ್ರಿಯು ದೊಡ್ಡ ವಿದ್ವಾಂಸನಾಗಿದ್ದನು. ತಮ್ಮ ತಂದೆಯಲ್ಲಿ ವಿದ್ಯಾವ್ಯಾಸಂಗಕ್ಕಾಗಿ ಬಂದ ಅನೇಕರಿಗೆ ಉದ್ಗ್ರಂಥದಲ್ಲಿ ಪಾಠವನ್ನು ಹೇಳುತಾ ಎಲ್ಲರಿಗೂ ಚಿಂತನೆಯನ್ನು ಮಾಡಿಸುತಾ ಇದ್ದನು. ವಿದ್ಯಾರ್ಥಿ ಸಾಮಾನ್ಯರಲ್ಲಿ

ರಾಮಶಾಸ್ತ್ರಿಯೂ ಸೇರಿ ವ್ಯಾಸಂಗಮಾಡುತಾ ಇದ್ದನು.

ನಮ್ಮ ಪೂರ್ವಾಚಾರರೀತ್ಯಾ ಪ್ರತಿಪಕ್ಷದಲ್ಲಿಯೂ ಅನಧ್ಯಯನವಾದ ಮೂರು ದಿವಸಗಳಲ್ಲಿ ಪಾಠವನ್ನು ಹೇಳುತಾ ಇರಲಿಲ್ಲ. ತ್ರಯೋದಶಿಯಾದ ಪ್ರದೋಷದ ದಿವಸ ವಿದ್ಯಾರ್ಥಿಗಳೆಲ್ಲರೂ ಪರೀಕ್ಷಾರ್ಥವಾಗಿ ತಾವುತಾವು ಓದಿದ ಭಾಗಗಳಲ್ಲಿ ಚಿಂತನೆಮಾಡಿ ವಾಕ್ಯಾರ್ಥವನ್ನು ಮಾಡುತಾ ಇದ್ದರು. ಇವರಲ್ಲಿ ಸಂಶಯ ಹುಟ್ಟಿದರೆ ಬಾಪುಶಾಸ್ತ್ರಿಯು ವ್ಯವಸ್ಥೆ ಮಾಡುತಾ ಇದ್ದನು. ರಾಮಶಾಸ್ತ್ರಿಯು ಇನ್ನೂ ತರ್ಕಶಾಸ್ತ್ರದ ಆದಿಭಾಗದಲ್ಲಿ ವ್ಯಾಸಂಗಮಾಡುತಾ ಇದ್ದನು. ಇವನನ್ನು ಕಂಡರೆ ಬಾಪುಶಾಸ್ತ್ರಿಗೆ ವಿಶೇಷವಾಗಿ ಉದಾಸೀನಭಾವವೇ ಇತ್ತು. ಆದರೆ ಒಂದಾನೊಂದು ಪ್ರದೋಷದಲ್ಲಿ ರಾಮಶಾಸ್ತ್ರಿಯ ನಿಸರ್ಗವಾದ ಪ್ರತಿಭೆಯು ಪ್ರಕಾಶಕ್ಕೆ ಬರಲು ಇನ್ನೊಂದು ಸಮಯ ದೊರೆಯಿತು.

ತರ್ಕಶಾಸ್ತ್ರದಮೇಲೆ ಮುಕ್ತಾವಳಿ ದಿನಕರಿ ಮುಂತಾದ ಪ್ರಕರಣ ಗ್ರಂಥಗಳಿವೆಯಷ್ಟೆ. ಚಿಂತಾಮಣಿ ಎಂದು ನವೀನ ಗ್ರಂಥವೂ ಇದೆ. ಇದನ್ನು ಗಂಗೇಶ್ವರಮಿಶ್ರೋಪಾಧ್ಯಾಯರು ಬರೆದರು. ಇವರ ಹೆಸರನ್ನು ಯಾವಾಗಲೂ ಗೌರವಾರ್ಥಕ ಬಹುವಚನದಲ್ಲಿಯೇ ಹೇಳತಕ್ಕವಾಡಿಕೆ ಇದೆ. ಚಿಂತಾಮಣಿಗೆ ದೀಧಿತಿ ಅಥವಾ ಶಿರೋಮಣಿ ಎಂದು ರಘು

ನಾಥಭಟ್ಟಾಚಾರ್ಯರು ವ್ಯಾಖ್ಯಾನವನ್ನು ರಚಿಸಿದಾರೆ. ಚಿಂತಾ ಮಣಿಯು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ ಇವು ಗಳಮೇಲೆ ರಚಿಸಿದ ಗ್ರಂಥವಾಗಿದೆ. ಇದಕ್ಕೆ ವ್ಯಾಖ್ಯಾನ ವಾಗಿ ದೀಧಿತಿ ಎಂಬ ಗ್ರಂಥ ಹುಟ್ಟಿದೆ. ಇದರಲ್ಲಿ ಚತು ರ್ದಶ ಲಕ್ಷಣಗಳು ಹೇಳಿವೆ.

ಈ ಸಂಗತಿ ಕುರಿತು ಮುಂದೆ ನಡೆದ ವೃತ್ತಾಂತ ವನ್ನು ಹೇಳುವುದಕ್ಕೆ ಮುಂಚೆ, ಈಗಿನ ವಿದ್ಯಾರ್ಥಿವರ್ಗಕ್ಕೆ ಹೊಸಪರಿ ಎಂದು ಕಾಣಬಹುದಾದ ಮತ್ತೊಂದು ವಿಷಯ ವನ್ನು ಹೇಳಬೇಕಾಗಿದೆ. ಪೂರ್ವದಲ್ಲಿ ಅಕ್ಷರಗಳನ್ನು ಮೊಳೆ ಗಳಮೇಲೆ ಕೆತ್ತಿ ಅವುಗಳನ್ನು ಜೋಡಿಸಿ ಗ್ರಂಥಗಳನ್ನು ಮುದ್ರಿಸುತಿರಲಿಲ್ಲ. ಇಂಥಾ ಎಂತ್ರವೇ ನಮ್ಮವರಲ್ಲಿರಲಿಲ್ಲ. ಆದ್ದರಿಂದ ಪುಸ್ತಕಗಳು ದೊರೆಯುವುದು ಕಷ್ಟವಾಗಿತ್ತು. ಇದಕ್ಕಾಗಿ ನಮ್ಮ ಪಂಡಿತರು ಬಹುಮಟ್ಟಿಗೆ ಎಲ್ಲವನ್ನೂ ಬಾಯಿಗೆ ಗಟ್ಟಿಮಾಡಿ ಅಗತ್ಯಬಿದ್ದಾಗ ಬಾಯಿಯಲ್ಲಿಯೇ ಎಲ್ಲವನ್ನೂ ಹೇಳುತಾ ಇದ್ದರು. ವೇದ, ಶಾಸ್ತ್ರ, ಅವುಗಳ ಮೇಲಿನ ವ್ಯಾಖ್ಯಾನ, ಮೊದಲುಗೊಂಡು ಇವರಿಗೆ ಬಾಯಿಗೆ ಬರುತಾ ಇತ್ತು. ಅನೇಕ ವಿಧವಾದ ಪೆಟ್ಟಿಗೆಗಳಲ್ಲಿ ತುಂಬಿ ಇಡಬಹುದಾದಷ್ಟು ಗ್ರಂಥಗಳನ್ನು ನಮ್ಮ ಪಂಡಿತರು ಚ ಚು ಬಿಡದೆ ಪ್ರವಾಹವಾಗಿ ಬಾಯಲ್ಲಿ ಹೇಳುತಿದ್ದರು. ಪ್ರತಿ

ಪಂಡಿತನೂ ಒಂದು ಪುಸ್ತಕಶಾಲೆಯಾಗಿದ್ದನು. ಇವರು ಗಿಣಿಗಳಂತೆ ಎಲ್ಲವನ್ನೂ ಬಾಯಲ್ಲಿ ಹೇಳುತಾರೆ, ತಾವು ಹೇಳುವುದಕ್ಕೆ ಅರ್ಥ ತಿಳಿಯದೆ ಸುಮ್ಮನೆ ಸದ್ದುಮಾಡಿ ಪ್ರಯೋಜನವೇನು ? ಎಂದು ಕೆಲವು ಇಂಗ್ಲಿಷ್‌ಭಾಷಾ ಪಂಡಿತರು ಹಾಸ್ಯಮಾಡಿ ಮಾತನಾಡುತಾರೆ. ಚೆನ್ನಾಗಿ ಪರೀಕ್ಷಿಸಿ ನೋಡಿಕೊಂಡು ಹೋದರೆ ಈ ಮಾತಿನಿಂದ ಪರಿಹಾಸಮಾಡುವವರ ಅವಿಜ್ಞತೆ ಪ್ರಕಾಶವಾಗುವುದು. ಒಂದು ಪದಕ್ಕೆ ಇನ್ನೊಂದು ಪ್ರತಿಪದವನ್ನಾಗಲಿ ಅಥವಾ ನಾಲ್ಕೈದು ಪದಗಳನ್ನು ಸೇರಿಸಿಯಾಗಲಿ ಹೇಳಿಬಿಟ್ಟರೆ ತಾವು ಅರ್ಥ ಹೇಳಿದೆವೆಂತಲೂ ತಾವು ಅರ್ಥಮಾಡಿಕೊಂಡೆವೆಂತಲೂ ಈಗಿನವರು ತಿಳಿದುಕೊಂಡಿದಾರೆ. ಟಿಕ್ ಎಂದರೆ ಟೊಕ್ ಎಂದು ಅರ್ಥ ಎಂಬದಾಗಿ ಹೇಳುವುದರಲ್ಲಿ ಕೇವಲವಾಗಿ ತಾವು ನಿಸ್ಸೀಮರಾದೆವೆಂದು ಹೊಗಳಿಕೊಳ್ಳುತಾರೆ. ಇದು ತಪ್ಪು. ಒಂದು ಪದದಲ್ಲಿರುವ ಸ್ವರವ್ಯಂಜನಗಳು ಹೇಗೆ ಹುಟ್ಟಿದವು ಎಂಬುವುದನ್ನು ಮೊದಲುಮಾಡಿಕೊಂಡು ಅದರ ಪ್ರಯೋಗ ಪ್ರಯೋಜನ ಮೊದಲಾಗಿ ಆದ್ಯಂತವನ್ನೂ ಹೇಳುವವರೆಗೆ ನಮ್ಮವರು ಬಿಡುವುದಿಲ್ಲ. ಉಳಿದ ಸಂಗತಿಗಳಿರಲಿ. ವೇದಕ್ಕೆ ಅರ್ಥಮಾಡಬೇಕಾದರೆ ವೇದಾಂಗಗಳು ಉಪಾಂಗಗಳು ಇವೆಲ್ಲಾ ಹುಟ್ಟವೆ. ಈ ಅರ್ಥ ವಿಚಾರಕ್ಕೋಸ್ಕರ

ವಾಗಿಯೇ ಮೀಮಾಂಸವೆಂಬ ಶಾಸ್ತ್ರವೇ ಹುಟ್ಟಿದೆ. ಒಂದು ಅರ್ಥ ವಿಚಾರಕ್ಕಾಗಿಯೇ ಇಷ್ಟೊಂದು ಸಲಕರಣಗಳನ್ನು ಇಟ್ಟುಕೊಂಡಿರುವ ನಮ್ಮ ಪಂಡಿತರು ಅರ್ಥವನ್ನರಿಯದೆ ಬಾಯಿಗೆ ಗಟ್ಟಿಮಾಡಿಬಿಡುತಾರೆಂದು ಹೇಳುವುದು ಸಾಧು ವಲ್ಲ. ಅರ್ಥವನ್ನು ಮುಂದಕ್ಕೆ ತಿಳಿದುಕೊಳ್ಳಲು ಬಾಯಿ ಪಾಠ ಮಾಡಬೇಕಾದ್ದು ಒಂದು ಸಾಧಕವಾಗಿದೆ. ಇಂಥಾ ಅರ್ಥಶಾಸ್ತ್ರವನ್ನು ಅರಿಯದೆ, ದ್ರವ್ಯಲಾಭವನ್ನೂ ಸಂಪಾದನೆ ಯನ್ನೂ ಮಾಡಿಕೊಳ್ಳತಕ್ಕ ಟಿಪ್ಪಣಿಗೆ ಅರ್ಥಶಾಸ್ತ್ರವೆಂದು ಹೆಸರಿಟ್ಟು ಅಪಾರ್ಥಕ್ಕೆ ಮಾರ್ಗಮಾಡಿರುವ ಪಂಡಿತರು ಇನ್ನೂ ವಿಚಾರಮಾಡಿ ಮಾತನಾಡಿದರೆ ಉತ್ತಮ. ಇದ ಕ್ಕಾಗಿ ನಮ್ಮವರು ಬಾಯಿಗೆ ಗ್ರಂಥಗಳನ್ನು ಗಟ್ಟಿಮಾಡುತಾ ಇದ್ದದು ನಿಜ. ಆದರೆ ಕೆಲವು ಪಂಡಿತರು ಓಲೆಯಲ್ಲಿ ಯಾಗಲಿ ಕಾಗದದಲ್ಲಿಯಾಗಲಿ ಗ್ರಂಥಗಳನ್ನು ಬರೆದು ಇರಿ ಸುತಾಲೂ ಇದ್ದರು. ಗುರುವಿನ ಬಳಿಯಲ್ಲಿ ಆಯಾ ಶಾಸ್ತ್ರ ಗಳನ್ನು ವ್ಯಾಸಂಗಮಾಡತಕ್ಕ ವಿದ್ಯಾರ್ಥಿ ಯೊಬ್ಬೊಬ್ಬನಲ್ಲಿ ಯೂ ಪುಸ್ತಕ ವಿರುತಿರಲಿಲ್ಲ. ಗುರುವಿನಲ್ಲಿಯೇ ಪುಸ್ತಕ ವಿರುವುದು; ಒಂದು ದಿವಸದ ಪಾಠವನ್ನು ಓದಿದ ತರು ವಾಯ ಶಿಷ್ಯರು ಗುರುಗಳಿಂದ ಪುಸ್ತಕವನ್ನು ಇಸುಕೊಂಡು ಮರುದಿವಸ ಓದಬೇಕಾದ ಭಾಗವನ್ನು ಬೇರೆಬೇರೆ ಕಾಗದ

ಅಥವ ಓಲೆಯಮೇಲೆ ಬರೆದುಕೊಂಡು ಮರುದಿವಸ ಅದನ್ನು ಓದಿಕೊಳ್ಳುತಾ ಇದ್ದರು. ಶಿಷ್ಯರು ಪಾಠಮಾಡುವುದಕ್ಕೂ ಚಿಂತನೆಮಾಡುವುದಕ್ಕೂ ಇದು ಹೊರತು ಬೇರೆ ಮಾರ್ಗವೇ ಇರಲಿಲ್ಲ. ಈಗಿರುವಂತೆ ಅಚ್ಚಾದ ಪುಸ್ತಕಗಳು ಆಗ ಇರಲಿಲ್ಲ.

ಮೇಲೆಕಂಡ ಕಥಾಸರಣಿಯನ್ನು ಮುಂದಕ್ಕೆ ಸಾಗಿಸೋಣ. ಒಂದಾನೊಂದು ಪ್ರದೋಷದಲ್ಲಿ ತ್ರಿಯಂಬಕಶಾಸ್ತ್ರಿಗಳ ಶಿಷ್ಯರು ಚಿಂತನೆಯರೂಪವಾದ ವಾಕ್ಯಾರ್ಥವನ್ನು ಮಾಡುತಾ ಇದ್ದರು. ಚತುರ್ದಶ ಲಕ್ಷಣದಲ್ಲಿ ಚರ್ಚೆ ಜರುಗುತಿತ್ತು. ವಿದ್ಯಾರ್ಥಿಗಳು ಹನ್ನೆರಡನೇ ಲಕ್ಷಣವನ್ನು ಹೇಳುತಾ ಇದ್ದರು. ಇದೆಲ್ಲವನ್ನೂ ಮನಸ್ಸಿಟ್ಟು ಕೇಳುತಾ ಇದ್ದ ರಾಮಶಾಸ್ತ್ರಿಯು ಆ ಹನ್ನೆರಡನೇ ಲಕ್ಷಣದಲ್ಲಿ ಹೇಳಿರುವುದನ್ನು ಹದಿಮೂರನೇ ಲಕ್ಷಣದಲ್ಲಿ ಹೇಳಿರುವ ಪ್ರಕಾರ ಸ್ಥಾಪಿಸಬಹುದಲ್ಲಾ ಎಂದು ಉಪವಾದನಮಾಡಿ ಪೂರ್ವಪಕ್ಷವನ್ನು ಹೇಳಿದನು. ಆ ಹದಿಮೂರನೇ ಲಕ್ಷಣವನ್ನು ಈತನು ಓದಿರಲಿಲ್ಲ. ಆದಾಗ್ಗೂ ಅದೆಲ್ಲವನ್ನೂ ಓದಿ ಪಂಡಿತನಾದವನ ಧೋರಣೆಗಿಂತಲೂ ಹೆಚ್ಚಾಗಿ ಪೂರ್ವಪಕ್ಷಮಾಡಿದನು. ಆ ವಿದ್ಯಾರ್ಥಿಗಳು ರಾಮಶಾಸ್ತ್ರಿಗೆ ಉತ್ತರವನ್ನು ಹೇಳಲಾರದೇ ಹೋದರು. ಅಲ್ಲಿದ್ದ ವಿದ್ಯಾರ್ಥಿಗಳಿಗೆ ಇದು

ಹೊಸದಾಗಿ ಕಂಡಿತು. ಮತ್ತು ತಮಗಿಂತಲೂ ಕಿರಿಯವ ನಾಗಿಯೂ ಪ್ರವಚನದಲ್ಲಿ ಕೀಳ್‌ತೆರದವನಾಗಿಯೂ ಇದ್ದ ರಾಮನ ಮಾತಿನಲ್ಲಿ ಬರೆದದ್ದನ್ನು ಓದಿಕೊಂಡು ಗಟ್ಟಮಾ ಡುತಾ ಇದ್ದ ಆ ವಿದ್ಯಾರ್ಥಿಗಳಿಗೆ ತಿರಸ್ಕಾರವೂ ಸಹಾ ಹು ಟ್ಟಿತು. ಹುಟ್ಟುತಾ ಬಂದ ಪ್ರತಿಭೆಗೂ ಕಲಿತ ವಿದ್ಯಕ್ಕೂ ಇದೇ ವ್ಯತ್ಯಾಸ.

ಇದೂ ಅಲ್ಲದೆ ವಿದ್ಯಾರ್ಥಿವರ್ಗದವರಲ್ಲಿ ಇನ್ನೊಂದು ಪೂರ್ವಾಚಾರವು ನಡೆದು ಬರುತಾ ಇತ್ತು. ವಿದ್ಯಾರ್ಥಿಗಳಲ್ಲಿ ಪರೀಕ್ಷಾರ್ಥವಾಗಿ ಈ ವಿಧವಾದ ಶಾಸ್ತ್ರಾರ್ಥವು ಜರಗುವಾಗ್ಗೆ ಒಬ್ಬನ ಪ್ರಶ್ನೆಗೆ ಇನ್ನೊಬ್ಬ ಉತ್ತರಕೊಡದೆ ಹೋದರೆ, ಉತ್ತರ ಹೇಳಲು ಬಾರದವನು ಪ್ರಶ್ನೆ ಕೇಳಿದವನಿಗೆ ಮುಂ ದಿನ ದಿವಸದ ಪಾಠವನ್ನು ಅಥವಾ ಇನ್ನೂ ಹೆಚ್ಚಾದ ಪಾಠವನ್ನು ಗುರುಗಳ ಪುಸ್ತಕದಿಂದ ಬರೆದುಕೊಡಬೇ ಕೆಂತ ಒಂದು ವಿಧಿ ಇತ್ತು. ಈ ಕೆಲಸವನ್ನು ಕೈಲಾಗದ ಶಿಷ್ಯನಿಗೆ ಒಂದು ಶಿಕ್ಷೆಯಾಗಿ ವಿಧಿಸುವ ವಾಡಿಕೆ ಇತ್ತು. ಅಲ್ಲಿದ್ದ ವಿದ್ಯಾರ್ಥಿಗಳಲ್ಲಿ ಯಾರಿಗೂ ರಾಮನ ಪ್ರಶ್ನೆಗೆ ಉ ತ್ತರ ಹೇಳಲು ಬಾರದೇ ಹೋದ್ದರಿಂದ, ಇವರೆಲ್ಲರಿಗೂ ಅವಮಾನವಾಯಿತು. ಇವರು ಈ ಮೈಸೂರ ವಿದ್ಯಾರ್ಥಿಗೆ ಪಾಠವನ್ನು ಬರೆದುಕೊಡಬೇಕೆಂಬ ವಿಧಿಗೆ ಒಳಗಾದರು.

ರಾಮನಮೇಲೆ ಈ ಜನರಿಗೆ ಸ್ಪರ್ಧೆಹುಟ್ಟುವುದಕ್ಕೆ ಇದೂ ಒಂದು ಕಾರಣವಾಯಿತು. ಆದ್ದರಿಂದ ಉಳಿದ ಎಲ್ಲಾ ಶಿಷ್ಯರೂ ಒಗ್ಗಟ್ಟಾಗಿ ಸೇರಿಕೊಂಡು, ರಾಮಶಾಸ್ತ್ರಿಯು ಸ್ಥಾಪಿಸುತ್ತಾ ಇದ್ದ ರೀತಿಗೆ ಅಹಂಕಾರವೆಂದು ಹೆಸರಿಟ್ಟು, ತಮ್ಮ ಚಿಕ್ಕ ಶಾಸ್ತ್ರಿಯಾದ ಬಾಪುಶಾಸ್ತ್ರಿಯಲ್ಲಿ ದೂರಹೇಳಿದರು. ಆತನ ಬಳಿಯಲ್ಲಿಯೂ ಮೈಸೂರ ಹುಡುಗನು ತನ್ನ ಮಾತನ್ನೇ ಸಾಧಿಸಲು, ಇವನಿಗೆ ಗರ್ವಭಂಗ ಮಾಡಬೇಕೆಂದು ಯೋಚಿಸಿ, ಬಾಪುಶಾಸ್ತ್ರಿಯು ತಮ್ಮ ತಂದೆಯಾದ ದೊಡ್ಡಶಾಸ್ತ್ರಿಗಳಲ್ಲಿ ಈ ಗಲಭೆ ಕುರಿತು ತಿಳಿಸಿದನು. ತ್ರಿಯಂಬಕ ಶಾಸ್ತ್ರಿಗಳು ಇವರಿವರಿಗೆ ಹುಟ್ಟಿದ ವಿವಾದವನ್ನು ಕೇಳಿ ಮೈಸೂರ ವಿದ್ಯಾರ್ಥಿಯು ಯಾವ ಭಾಗವನ್ನು ಓದುತ್ತಾನೆ ಎಂದು ವಿಚಾರಿಸಿದರು. ಚರ್ಚಾಸ್ಪದವಾದ ಹದಿಮೂರನೇ ಲಕ್ಷಣವನ್ನು ಇನ್ನೂ ರಾಮನು ಓದಿಲ್ಲವೆಂತಲೂ ಆ ಭಾಗದಲ್ಲಿ ಇವನಿಗೆ ಇನ್ನೂ ಪಾಠವಾಗಿಲ್ಲವೆಂತಲೂ ಗೊತ್ತಾಯಿತು. ಮುಂದೆ ಪಾಠವಾಗಲು ಪ್ರತಿಬರೆದುಕೊಳ್ಳುವುದಕ್ಕಾಗಿ ರಾಮನಿಗೆ ಆ ಪ್ರಕರಣವಿರುವ ಹಾಳೆಯನ್ನು ಕೊಟ್ಟಿದ್ದರೆ? ಎಂದು ತ್ರಿಯಂಬಕಶಾಸ್ತ್ರಿಗಳು ಕೇಳಿದರು. ಆ ಹಾಳೆಯನ್ನು ಅವನಿಗೆ ಕೊಟ್ಟಿರಲಿಲ್ಲವೆಂದು ಬಾಪುಶಾಸ್ತ್ರಿಯೂ ಇತರ ವಿದ್ಯಾರ್ಥಿಗಳೂ ಒಪ್ಪಿದರು. ಆಗ ತ್ರಿಯಂಬಕಶಾಸ್ತ್ರಿಗಳು

ಅವರನ್ನು ಕುರಿತು—ಈ ಭಾಗವನ್ನೇ ಓದದಿದ್ದಾಗ್ಯೂ ಆ ಬಗೆ ಪುಸ್ತಕವನ್ನು ಸಹಿತ ನೋಡದೇ ಇದ್ದಾಗ್ಯೂ ಈ ಮೈಸೂರ ವಿದ್ಯಾರ್ಥಿಯು ಹದಿಮೂರನೇ ಲಕ್ಷಣದಲ್ಲಿ ಹೇಳಿರುವ ಅಂಶವನ್ನು ತನ್ನ ಬುದ್ಧಿಯಿಂದ ಊಹಿಸಿ ಹೇಳಿರುವುದು ಬಹುಸಾಧುವಾಗಿದೆ. ಇವನು ಹೇಳಿ ಸ್ಥಾಪಿಸಿರುವಂತೆಯೇ ದೀಧಿತಿಕಾರ ರಘುನಾಥ ಭಟ್ಟಾಚಾರ್ಯರು ಹೇಳಿದಾರೆ. ಓದದೇ ಇದ್ದ ಭಾಗವನ್ನು ಕೂಡ ಓದಿದವನ ಧೋರಣೆಗಿಂತಲೂ ಹೆಚ್ಚಾಗಿ ಸ್ಥಾಪಿಸಿ ಸಾಧಿಸುವುದು ಈತನ ಚಾತುರ್ಯವನ್ನು ತೋರಿಸುತ್ತೆ. ಇವನು ಎರಡನೇ ದೀಧಿತಿಕಾರನಾಗಿದಾನೆ. ನೀವೆಲ್ಲಾ ಗದಾಧರಿ ಮೊದಲಾದ ಉದ್ಗ್ರಂಥಗಳನ್ನು ಓದಿದ್ದಾಗ್ಯೂ ನಿಮಗೆ ಗೊತ್ತಾಗಲಿಲ್ಲ; ಈ ಬಾಲಕನ ಯೋಗ್ಯತೆ ನಿಮಗೆ ಬರಲಿಲ್ಲ; ಎಂಬದಾಗಿ ತ್ರಿಯಂಬಕಶಾಸ್ತ್ರಿಗಳು ಆ ವಿದ್ಯಾರ್ಥಿಗಳನ್ನೂ ತಮ್ಮ ಮಗನಾದ ಬಾಪುಶಾಸ್ತ್ರಿಯನ್ನೂ ಸಹಾ ಹೆಚ್ಚಾಗಿ ಮೂದಲಿಸಿ ಮಾತನಾಡಿ, ರಾಮಶಾಸ್ತ್ರಿಯನ್ನು ಕೊಂಡಾಡಿದರು. ಆ ದಿವಸ ಮೊದಲುಗೊಂಡು ರಾಮಶಾಸ್ತ್ರಿಗೆ ತಾವೇ ಪಾಠವನ್ನು ಹೇಳುತಾ ಬಂದರು.

ತ್ರಿಯಂಬಕಶಾಸ್ತ್ರಿಗಳಲ್ಲಿ ಪಾಠಹೇಳುವ ಕ್ರಮವು ವಿದ್ಯಾರ್ಥಿಗಳಿಗೆ ಬಹು ಕಠಿಣವಾಗಿತ್ತು. ಯಾವ ವಿದ್ಯಾ

ರ್ಥಿಯೂ ಯಾವ ಪ್ರಶ್ನೆಯನ್ನೂ ಕೇಳಕೂಡದು. ಒಂದು ವೇಳೆ ಕೇಳಿದರೆ ಅದು ಸಂಗತವಾಗಿರಬೇಕು. ಕೇಳುವ ಪ್ರಶ್ನೆ ಸ್ವಲ್ಪ ಅಸಂಗತವಾದರೆ ತ್ರಿಯಂಬಕಶಾಸ್ತ್ರಿಗಳಿಗೆ ಬಹಳ ಕೋಪ ಬರುತಾ ಇತ್ತು. ಅಂಥಾ ವಿದ್ಯಾರ್ಥಿಯು ತಮ್ಮಲ್ಲಿ ವ್ಯಾಸಂಗಮಾಡಲು ಅವನಿಗೆ ಯೋಗ್ಯತೆ ಇಲ್ಲ ವೆಂದು ಅವನನ್ನು ಆಚೆಗೆ ಕಳುಹಿಸಿಬಿಡುತಾ ಇದ್ದರು. ಈ ಭೀತಿಯು ರಾಮಶಾಸ್ತ್ರಿಗೆ ಬಹುವಾಗಿ ಅಂಟಕೊಂಡು ಇತ್ತು. ಹೀಗಿರುವಾಗ್ಗ ಒಂದು ದಿವಸ ಪಾಠವಾಗುತಾ ಇರುವಾಗ ರಾಮಶಾಸ್ತ್ರಿಗೆ ಒಂದು ಸಂಶಯ ಹುಟ್ಟಿತು. ಗುರುಗಳನ್ನು ಕೇಳಿದರೆ ಎಲ್ಲಿ ಕೋಪಮಾಡಿಕೊಂಡು ಆಚೆಗೆ ಕಳುಹಿಸಿಬಿಡುತಾರೋ ಎಂದು ರಾಮಶಾಸ್ತ್ರಿಯು ಪ್ರಶ್ನೆ ಮಾಡದೆ ಸುಮ್ಮನಿದ್ದನು. ಈ ಸಂಶಯವನ್ನು ಹರಿಸಿಕೊಳ್ಳಲು ಸಮಯವನ್ನು ಈತನು ಕಾಯುತಿದ್ದನು.

ಗುರುಗಳ ಮನೆಯಲ್ಲಿ ಊಟಾಮಾಡಿಕೊಂಡು ಶಿಷ್ಯರು ವ್ಯಾಸಂಗ ಮಾಡುತಿದ್ದರಷ್ಟೆ. ಆದರೆ ಶಿಷ್ಯರು ಗುರುವಿನಲ್ಲಿ ಹೆಚ್ಚಾದ ಭಕ್ತಿಯನ್ನು ಇರಿಸಿಕೊಂಡು ಇರುತಿದ್ದರು. ಗುರುವಿನ ಮನೆಯಲ್ಲಿ ಸಾಧಾರಣವಾದ ಕೆಲಸಗಳನ್ನೆಲ್ಲಾ ಮಾಡುತಿದ್ದರು. ಮನೆಯಲ್ಲಿ ಬಟ್ಟೇ ಒಗೆಯುವುದು, ನೀರನ್ನು ಸೇದಿಹಾಕುವುದು, ಇತರ ಮನೆಗೆಲಸ

ಗಳನ್ನು ಮಾಡುವುದು, ಎಂಜಲನ್ನು ಎತ್ತಿ ಗೋಮಯ ಹತ್ತಿಸುವುದು, ಇದೇ ಮೊದಲಾದ ಎಲ್ಲಾ ಕೆಲಸಗಳೂ ಗುರುಶುಶ್ರೂಷೆ ಎಂದು ಮಾಡುತಿದ್ದರು. ಇಲ್ಲದ ಪ್ರತಿಷ್ಟೆಯನ್ನು ಮೇಲೆಹಾಕಿಕೊಂಡು ಗುರುವನ್ನು ತಿರಸ್ಕರಿಸತಕ್ಕ ಬುದ್ಧಿಯು ಆಗಿನ ವಿದ್ಯಾರ್ಥಿಗಳಿಗೆ ಹುಟ್ಟಿರಲಿಲ್ಲ. ಹೀಗಿರುವಲ್ಲಿ ರಾಮಶಾಸ್ತ್ರಿಯ ಸಂದೇಹ ನಿವೃತ್ತಿಯಾಗುವುದಕ್ಕೆ ಒಂದು ಸಮಯ ದೊರೆಯಿತು. ಒಂದು ದಿವಸ ಶಾಸ್ತ್ರಿಗಳು ಭೋಜನಮಾಡಿ ಕೈತೊಳೆದುಕೊಳ್ಳುವುದಕ್ಕೆ ಬಂದರು. ಆಗ ರಾಮನು ತಂಬಿಗೆಯಲ್ಲಿ ನೀರನ್ನು ತುಂಬಿ ಅವರ ಕೈಗೆ ಕೊಟ್ಟನು. ಅವರು ಕೈತೊಳೆದುಕೊಂಡು ಹೋಗುತಾ ಇರುವಾಗ್ಗೆ ರಾಮನು ಧೈರ್ಯಮಾಡಿಕೊಂಡು, ತನಗೆ ಪಾಠದಲ್ಲಿ ಹುಟ್ಟಿದ ಸಂಶಯವನ್ನು ಕುರಿತು ಪ್ರಶ್ನೆಮಾಡಿದನು. ಶಾಸ್ತ್ರಿಗಳು ಆಗ ಯಾವ ಮಾತನ್ನೂ ಆಡದೆ ಸುಮ್ಮನಿದ್ದರು. ತರುವಾಯ ಮರುದಿವಸ ಶಾಸ್ತ್ರಿಗಳು ದೇವತಾರ್ಚನೆಮಾಡುತಿರುವಾಗ್ಗೆ ರಾಮನನ್ನು ಕರೆದು ಅವನ ಸಂಶಯ ಹರಿಯುವಹಾಗೆ ಉತ್ತರವನ್ನು ಹೇಳಿದರು.

ರಾಮನು ರಾಯದುರ್ಗದಲ್ಲಿ ಸರಿಯಾಗಿ ವ್ಯಾಸಂಗಮಾಡಿಕೊಂಡಿರಲು ಅನುಕೂಲ್ಯ ಕಡಮೆಯಾಗಿತ್ತು. ಕೂತುಕೊಳ್ಳುವುದಕ್ಕೆ ಸರಿಯಾದ ಸ್ಥಳವಿರಲಿಲ್ಲ. ಓದುವುದಕ್ಕೆ

ಬೆಳಕು ಇರಲಿಲ್ಲ. ಆದರೂ ರಾಮನಿಗೆ ಇದು ಯಾವುದೂ ಪ್ರತಿಬಂಧಕಗಳಾಗಿ ತೋರಲೇ ಇಲ್ಲ. ಕಸಕಡ್ಡಿ ಮೊದಲಾದ್ದನ್ನು ಹಗಲು ಕೂಡಹಾಕಿಕೊಂಡು ಅನುಕೂಲವಾದ ಕಡೆ ಬೈಲಿನಲ್ಲಿ ಕೂತು ಆ ಕಡ್ಡಿಕಸಕ್ಕೆ ಬೆಂಕಿ ಹತ್ತಿಸಿ, ಅದರ ಬೆಳಕಿನಲ್ಲಿ ಪುಸ್ತಕವನ್ನು ಹಿಡಿದು ಓದುತಾ ಚಿಂತನೆ ಮಾಡುತಿದ್ದನು. ತ್ರಿಯಂಬಕಶಾಸ್ತ್ರಿಗಳು ಒಂದು ದಿವಸ ರಾಮಶಾಸ್ತ್ರಿಯನ್ನು ಕುರಿತು—ಅಯ್ಯಾ ಬಾಲಕನೆ, ನಿನಗೆ ಇನ್ನೂ ವಯಸ್ಸು ಕಡಮೆಯಾಗಿದೆ, ಶಾಸ್ತ್ರ ವ್ಯಾಸಂಗಕ್ಕಾಗಿ ನೀನು ಇಷ್ಟುದೂರ ಬಂದು ನಿರ್ವಹಿಸಿಕೊಂಡು ಇರಲು ದೇಹದಲ್ಲಿ ದಾರ್ಢ್ಯಸಾಲದು. ನಿಮ್ಮೂರಿಗೆ ಹೋಗಿ ಅಲ್ಲಿಯೇ ಯೋಗ್ಯರಾದ ವಿದ್ವಾಂಸರಲ್ಲಿ ವ್ಯಾಸಂಗಮಾಡಬಹುದು ಎಂದರು. ಆಗ ರಾಮಶಾಸ್ತ್ರಿಯು — ಸ್ವಾಮಿ, ತಮ್ಮ ಸನ್ನಿಧಾನದಲ್ಲಿ ವ್ಯಾಸಂಗಮಾಡಿ ಕೃತಾರ್ಥನಾಗಬೇಕೆಂದು ಬಂದೆನಲ್ಲಾ, ನನ್ನ ಮನೋರಥ ಭಗ್ನವಾಯಿತಲ್ಲಾ ಎಂದನು. ಆಗ ಆ ತ್ರಿಯಂಬಕಶಾಸ್ತ್ರಿಗಳು ಈತನನ್ನು ಕುರಿತು — ಅಯ್ಯಾ, ಮೈಸೂರಲ್ಲಿ ತಿರುಪತಿ ಶ್ರೀನಿವಾಸಾಚಾರ್ಯರೆಂದು ಇದಾರೆ. ಅವರು ಪಂಡರಪುರದ ವಿಠಲೋಪಾಧ್ಯಾಯರಲ್ಲಿ ವ್ಯಾಸಂಗ ಮಾಡಿದವರು. ನಾನು ನಾಗಪುರದ ಹನುಮಂತಾಚಾರ್ಯರಲ್ಲಿ ವ್ಯಾಸಂಗಮಾಡಿದೆ. ಶ್ರೀನಿ

ವಾಸಾಚಾರ್ಯರು ದೊಡ್ಡಪಂಡಿತರು, ನಾನು ಬಲ್ಲೆ. ನೀನು ಸಂಶಯಪಡದೆ ಹೋಗಿ ಅವರಲ್ಲಿ ವ್ಯಾಸಂಗಮಾಡು ಎಂದು ಹೇಳಿದರು. ಅವರ ಅಪ್ಪಣೇ ಪ್ರಕಾರ ರಾಮಶಾಸ್ತ್ರಿಯು ಮೈಸೂರಿಗೆ ಬಂದು ತಿರುಪತಿ ಶ್ರೀನಿವಾಸಾಚಾರ್ಯರಲ್ಲಿ ವ್ಯಾಸಂಗಮಾಡಿ ತರ್ಕಶಾಸ್ತ್ರ ವೇದಾಂತ ಶಾಸ್ತ್ರಗಳಲ್ಲಿರುವ ಸಮಸ್ತ ಗ್ರಂಥಗಳನ್ನೂ ಓದಿ ಗರ್ಗೇಶ್ವರಿಯಲ್ಲಿದ್ದ ಅಂಣಾಶಾಸ್ತ್ರಿಗಳೆಂಬವರಲ್ಲಿ ಭಾಷ್ಯಶಾಂತಿಯನ್ನು ಮಾಡಿದರು.

ತಿರುಪತಿ ಶ್ರೀನಿವಾಸಾಚಾರ್ಯರಲ್ಲಿ ರಾಮಶಾಸ್ತ್ರಿಯು ಶಾಸ್ತ್ರ ವ್ಯಾಸಂಗಮಾಡುತಾ ಇರುವಾಗ್ಗೆ ಇನ್ನೊಂದು ಹೆಚ್ಚುಗಟ್ಟಲೆ ಜರಗಿತು. ಈ ಮಧ್ಯಕಾಲದಲ್ಲಿ ತ್ರಿಯಂಬಕ ಶಾಸ್ತ್ರಿಗಳು ಮೈಸೂರ ಸಂಸ್ಥಾನಕ್ಕೆ ಎರಡನೇಸಾರಿ ಬಂದರು. ಶ್ರೀಕೃಷ್ಣರಾಜ ಪ್ರಭುವು ಅವರನ್ನು ಹೆಚ್ಚಾದ ಗೌರವದೊಡನೆ ಬರಮಾಡಿಕೊಂಡರು. ಶಾಸ್ತ್ರಿಗಳು ಅರಮನೆಗೆ ಬಂದರು. ಸಂಸ್ಥಾನದ ವಿದ್ವಾಂಸರೆಲ್ಲಾ ಆ ದಿವಸ ರಾಜ ಸಭೆಯಲ್ಲಿ ಸೇರಿದರು. ಆದರೆ ಸಾಕ್ಷಾತ್ ದಕ್ಷಿಣಾಮೂರ್ತಿಯಹಾಗೆ ಬಂದು ಕೂತಿರುವ ಆ ತ್ರಿಯಂಬಕ ಶಾಸ್ತ್ರಿಗಳ ಸಗಂಡ ಶಾಸ್ತ್ರಾರ್ಥಕ್ಕೆ ಕೂತುಕೊಳ್ಳಲು ಯಾರಿಗೂ ಧೈರ್ಯ ಉಂಟಾಗಲಿಲ್ಲ. ಆಗ ಆಸ್ಥಾನ ಪಂಡಿತರಾಗಿದ್ದ ಕುಟ್ಟಿಶಾಸ್ತ್ರಿಗಳು ಇವರೊಡನೆ ವಾಕ್ಯಾರ್ಥಕ್ಕೆ

ಕೂತು ಕೊನೆಗೆ ಯತ್ನವಿಲ್ಲದೆ ಸುಮ್ಮನಾದಂತೆ ತಿಳಿಯು ಬರುತ್ತೆ. ಮಹಾ ವಿದ್ವಾಂಸರಾದ ತ್ರಿಯಂಬಕಶಾಸ್ತ್ರಿಗಳು ಮೈಸೂರಿಗೆ ಬರುವರೆಂದು ಕೇಳಿ, ಇವರನ್ನು ನೋಡುವು ದಕ್ಕಾಗಿ ದಕ್ಷಿಣದೇಶದ ಕೆಲವು ಪಂಡಿತರು ಬಂದಿದ್ದರು. ಹಾಗೆಯೇ ಕಾಂಚೀಪುರದಿಂದ ಶ್ರಿನಿವಾಸಾಚಾರ್ಯರೆಂಬ ಶ್ರೀ ವೈಷ್ಣವ ಪಂಡಿತರೂ ಬಂದು ಆ ಸಭೆಗೆ ಹೋಗಿದ್ದರು. ಅಲ್ಲಿ ತ್ರಿಯಂಬಕಶಾಸ್ತ್ರಿಗಳೊಡನೆ ವಾಕ್ಯಾರ್ಥಕ್ಕೆ ಆರಂಭ ವಾಯಿತು. ಕೊನೆಗೆ ಅವರ ಪ್ರಶ್ನೆಗೆ ಸಮಾಧಾನಹೇಳಲು ಗೊತ್ತಾಗದೆ ಕಂಚಿ ಶ್ರೀನಿವಾಸಾಚಾರ್ಯರು ಸುಮ್ಮನಾದರು. ಈ ಸಭೆಯಲ್ಲಿ ವಿದ್ಯಾರ್ಥಿಯಾದ ರಾಮಶಾಸ್ತ್ರಿಯೂ ಇದ್ದ ನು. ಇದು ಮುಂದಿನ ಕಥಾಸರಣಿಗಾಗಿ ಜ್ಞಾಪಕದಲ್ಲಿ ಇರಬೇಕು.

ಈ ಸಂದರ್ಭದಲ್ಲಿ ತಿರುಪತಿ ಶ್ರೀನಿವಾಸಾಚಾರ್ಯ ರಿಗೂ ತ್ರಿಯಂಬಕಶಾಸ್ತ್ರಿಗಳಿಗೂ ಪರಸ್ಪರ ಭೇಟಿಯಾಗಿತ್ತು. ಆಗ ತ್ರಿಯಂಬಕಶಾಸ್ತ್ರಿಗಳು ತಿರುಪತಿ ಶ್ರೀನಿವಾಸಾಚಾರ್ಯ ರನ್ನು ಕುರಿತು ವಿದ್ಯಾರ್ಥಿಯಾದ ರಾಮನ ವಿಷಯವನ್ನು ಪ್ರಸ್ತಾಪಿಸಿ, ರಾಮನ ಬುದ್ಧಿಯನ್ನು ಕೊಂಡಾಡಿ—ಇವನಿಗೆ ನೀವು ಚೆನ್ನಾಗಿ ಪಾಠವನ್ನು ಹೇಳಿ ಪಂಡಿತನನ್ನು ಮಾಡಿದ ಕೆ, ನಿಮಗೆ ಬಹಳ ಯಶಸ್ಸು ಉಂಟು ಎಂದು ಹೇಳಿದರು.

ಇದು ಹಾಗಿರಲಿ. ಅತ್ತ ಮೈಸೂರಿಗೆ ಕಲ್ಯಾಣದು ರ್ಗದಿಂದ ಹಿಂತಿರಿಗಿ ಬರುವಾಗ್ಗೆ ರಾಮಶಾಸ್ತ್ರಿಗೆ ಸುಮಾರು ೧೬ ವರುಷ. ಕಲ್ಯಾಣದುರ್ಗಕ್ಕೆ ಹೋದ್ದರಿಂದ ವ್ಯಾಸಂಗ ವೇನೂ ಹೆಚ್ಚಾಗಿ ಜರಗದೇ ಇದ್ದಾಗ್ಗೂ, ನಮ್ಮ ಶಾಸ್ತ್ರಿಯ ಪ್ರತಿಭೆಯು ಪ್ರಕಾಶಕ್ಕೆ ಬಂತು. ಪ್ರತಿಕಕ್ಷಿಯು ಹೇಳುವ ಸಂಗತಿಯನ್ನು ಚೆನ್ನಾಗಿ ಗ್ರಹಿಸುವುದಕ್ಕೆ ಅಗತ್ಯವಾದ ಭಾ ಗಗಳನ್ನೆಲ್ಲಾ ತಿಳಿದುಕೊಳ್ಳೋಣ, ಅದರ ಸಹಾಯದಿಂದ ಪ್ರತಿಪಕ್ಷನವರು ಸಾಧಿಸಬಹುದಾದ ಅಂಶವನ್ನು ತಿಳಿ ಯೋಣ, ಮತ್ತು ಅದಕ್ಕೆ ಇರುವ ಬಾಧಕಗಳನ್ನು ಗೊ ತ್ತುಮಾಡಿ ಗೋಜನ್ನು ಬಿಡಿಸಿ, ಮನಸ್ಸಿನಲ್ಲಿಯೇ ಉಪ ಪಾದನಮಾಡಿ, ಇದಿರಾಳಿಗೆ ಸಾಧಕಗಳು ಏನೂ ಇಲ್ಲದಹಾಗೆ ಅವುಗಳನ್ನು ಖಂಡಿಸಲು ಅಗತ್ಯವಾದ ಅಂಶಗಳನ್ನು ನಿ ಷ್ಕಲ್ಮಿಷವಾದ ಚಿತ್ತವೃತ್ತಿಯೊಡನೆ ಯೋಚಿಸೋಣ, ಹೀ ಗೆ ಮಾಡಿದರೆ ಮನುಷ್ಯನಿಗೆ ತಾನು ಕೇಳದೇ ಇರತಕ್ಕ ಸಂಗತಿಯಾದರೂ ನಿಷ್ಕರ್ಷೆಯಾಗಿ ಗೊತ್ತಾಗಿ ವಿಷಯ ಕರತಲಾಮಲಕವಾಗುವುದು. ಇದೆಲ್ಲಕ್ಕೂ ಸಹಜವಾದ ಬು ದ್ಧಿಜಾತಿಯೂ ಅಂಥಾ ಬುದ್ಧಿ ಕೌಶಲ್ಯವನ್ನು ತಂದು ಕಾಲ ಕ್ಕೆ ಸರಿಯಾಗಿ ಒದಗಿಸತಕ್ಕ ಪ್ರಾಚೀನ ಕರ್ಮಪರಿಪಾ ಕವೂ ಅಗತ್ಯವಾಗಿ ಇದ್ದೇತೀರಬೇಕು. ಇದೆಲ್ಲವೂ ಸೇ

ರಿದ್ದ ಕಡೆಯೇ ಮನುಷ್ಯನಿಗೆ ಹೊಸ ಸಂಗತಿ ಸ್ಫುರಿಸತ ಕ್ಕದ್ದು. ಇಂಥಾ ಬುದ್ಧಿಜಾತಿಯನ್ನೇ ಪ್ರತಿಭೆ ಎಂದು ಹೇಳ ಬಹುದು. ಈ ಗುಣದ ಪ್ರಭಾವ ಅತಿಬಲವಾಗಿ, ಇತರ ರಿಗೆ ಇದನ್ನು ಅಳ್ಳಾಡಿಸುವುದಕ್ಕೆ ಸಾಮರ್ಥ್ಯಸಾಲದೆಂದು ತೋರುವವರೆಗೆ, ಜನಸಾಮಾನ್ಯಕ್ಕೆ ಹೊಟ್ಟೇಕಿಚ್ಚು ಹುಟ್ಟು ವುದು ಲೋಕದಲ್ಲಿ ವಾಡಿಕೆಯಾಗಿದೆ. ಈ ದುರ್ಗುಣವೆಂಬ ಪಿಶಾಚವು ಪಂಡಿತನಾದ ಬಾಪುಶಾಸ್ತ್ರಿಯನ್ನು ಸಹಿತ ಬಿಡದೇ ಹೋಯಿತು. ಇದನ್ನು ಉಚ್ಚಾಟನೆ ಮಾಡುವುದಕ್ಕೆ ಆತ ನಲ್ಲಿ ಮಂತ್ರಶಕ್ತಿಸಾಲದೇ ಹೋಯಿತು. ಮಹಾಪಂಡಿತ ರಾದ ತ್ರಿಯಂಬಕಶಾಸ್ತ್ರಿಗಳಲ್ಲಿ ವ್ಯಾಸಂಗಮಾಡಬೇಕೆಂಬ ರಾಮಶಾಸ್ತ್ರಿಯ ಕೋರಿಕೆಯು ನೆರವೇರದೇಹೋದ್ದು ಬಾಪು ಶಾಸ್ತ್ರಿ ಮತ್ತು ಇವನಂಥಾ ಅಲ್ಪಬುದ್ಧಿಯುಳ್ಳ ವಿದ್ಯಾರ್ಥಿಗಳ ಕ್ಷುದ್ರಗೇಡಿತನದಿಂದ ಹುಟ್ಟಿದ ಕಹಿಯಾದ ಫಲವೆಂದು ಹೇ ಳಲು ಸಂಶಯವೇನೂ ಇಲ್ಲ.

ಇಷ್ಟಾದಾಗ್ಯೂ ತ್ರಿಯಂಬಕಶಾಸ್ತ್ರಿಗಳೂ ತಮ್ಮ ಗುರು ಗಳೆಂದು ರಾಮಶಾಸ್ತ್ರಿಯು ಭಾವಿಸಿಕೊಂಡು ಅವರಲ್ಲಿ ಹೆ ಚ್ಚಾದ ಭಕ್ತಿಯನ್ನು ಇರಿಸಿಕೊಂಡು ಇದ್ದನು. ತ್ರಿಯಂಬಕ ಶಾಸ್ತ್ರಿಗಳು ಕೊನೆಗೆ ಸನ್ಯಾಸವನ್ನು ತೆಗೆದುಕೊಂಡು ಸಿದ್ಧಿ ಹೊಂದಿದರು. ಇವರ ಸಮಾಧಿಯು ಕಲ್ಯಾಣದುರ್ಗದಕಡೆ

ಇರುವ ರಂಗಸಮುದ್ರವೆಂಬ ಸ್ಥಳದಲ್ಲಿದೆ. ರಾಮಶಾಸ್ತ್ರಿಯು ಗರ್ಗೇಶ್ವರೀ ಅಂಣಾಶಾಸ್ತ್ರಿಗಳಲ್ಲಿ ಭಾಷ್ಯಶಾಂತಿಯನ್ನುಮಾಡಿದನಷ್ಟೆ. ಕೆಲವು ದಿವಸಗಳು ಕಳೆದಮೇಲೆ ರಾಮಶಾಸ್ತ್ರಿಯು ಆ ರಂಗಸಮುದ್ರಕ್ಕೆ ಹೋಗಿ ತ್ರಿಯಂಬಕಶಾಸ್ತ್ರಿಗಳ ಸಮಾಧಿಯ ಬಳಿಯಲ್ಲಿ ಸೂತ್ರಭಾಷ್ಯವನ್ನು ಮೊದಲಿನಿಂದ ಕೊನೇವರೆಗೂ ಪಾರಾಯಣಮಾಡಿ ಸಮಾಧಿಗೆ ನಮಸ್ಕಾರಮಾಡಿ ಬಂದನು. ಇಂಥಾ ಗುರುಭಕ್ತಿಯ ವಿಚಾರವನ್ನು ಕೇಳಿದಾಗ ಈಗಿನ ವಿದ್ಯಾರ್ಥಿಗಳು ಇದು ಕೈಕಾಲು ಇಲ್ಲದ ಕಥೆ ಎಂದು ಹಾಸ್ಯಮಾಡಬಹುದು. ಆದರೆ ಇದು ನಿಶ್ಚಯವಾದ ಸಂಗತಿಯಾಗಿದೆ.

---

## ೪ನೇ ಅಧ್ಯಾಯ

### ಮೈಸೂರಲ್ಲಿ ವಾಸ—ಆಗಿನ ದರಬಾರಿನ ಸ್ಥಿತಿ.

ತಿರುಪತಿ ಶ್ರೀನಿವಾಸಾಚಾರ್ಯರಲ್ಲಿ ರಾಮಶಾಸ್ತ್ರಿಗಳು ಅನೇಕ ಗ್ರಂಥಗಳನ್ನು ಸಾಂಗವಾಗಿ ಓದಿ ಮುಗಿಸಿದರೆಂದು ಹಿಂದೆ ಕಾಣಿಸಿದೆಯಷ್ಟೆ. ಗುರುಗಳಿಗೆ ಈ ಶಿಷ್ಯನಮೇಲೆ ಕೇವಲ ಅಭಿಮಾನವಿತ್ತು. ಸ್ಮಾರ್ತ ವೈಷ್ಣವರೆಂಬ ವೈಷಮ್ಯವನ್ನು ಇವರು ಬಿಟ್ಟಿದ್ದರು. ಆ ಕಾಲದಲ್ಲಿ ಈ ಭೇದವು ಗ್ರಂಥದಲ್ಲಿಯೂ ವಾದದಲ್ಲಿಯೂ ಇತ್ತೇಹೊರತು ಈಚೆಗೆ ಆದ ಹಾಗೆ ವಿಪರೀತವಾಗಿರಲಿಲ್ಲ. ಶಾಸ್ತ್ರಜ್ಞರಲ್ಲದವರಲ್ಲಿ

ಇಂಥಾ ಭೇದಜ್ಞಾನವು ಹೆಚ್ಚಾಗಿಯೇ ಇರುವುದು. ಶ್ರೀನಿವಾಸಾಚಾರ್ಯರಿಗೆ ರಾಮಶಾಸ್ತ್ರಿಯಲ್ಲಿದ್ದಷ್ಟು ಅಭಿಮಾನವು ದ್ರೋಣಾಚಾರ್ಯರಿಗೆ ಅರ್ಜುನನಲ್ಲಿರಲಿಲ್ಲ. ಇದರ ವಿವರ ಮುಂದೆ ತಿಳಿಯುವುದು. ಆಚಾರ್ಯರು "ನಮ್ಮ ರಾಮುಡು" ಎಂತಲೂ "ರಾಮುಡುಶಾಸ್ತ್ರಿ" ಎಂತಲೂ ಈತನನ್ನು ಪ್ರೀತಿಯಿಂದ ಕರೆಯುತಾ ಇದ್ದರು. ರಾಮಶಾಸ್ತ್ರಿಯ ಪಾಂಡಿತ್ಯದ ಪ್ರಕಾಶವು ದಿನೇದಿನೇ ಹೆಚ್ಚುತಾ ಬಂತು. ಇವರ ತಂದೆಗೆ ಅರಮನೆಯಲ್ಲಿ ಸಮುಖದ ವಿದ್ವಾಂಸರೆಂದು ೫೦. ಐದು ವರಹ ಸಂಬಳವಿತ್ತು. ಆತ ತೀರಿಹೋದಮೇಲೆ ಇದು ನಿಂತುಹೋಗಿತ್ತು. ರಾಮಶಾಸ್ತ್ರಿಯ ಯೋಗ್ಯತೆಯನ್ನು ತಿಳಿದು ಶ್ರೀಕೃಷ್ಣರಾಜ ಒಡೆಯರವರು ಅದೇ ಸಂಬಳವನ್ನು ಈತನಿಗೆ ಮಾಡಿಕೊಟ್ಟರು. ಇವರ ತಂದೆಗೆ ಮೂರು ವರಹ ಇತ್ತೆಂತಲೂ ಅದೇ ಸಂಬಳವೇ ರಾಮಶಾಸ್ತ್ರಿಗೆ ಆಯಿತೆಂತಲೂ ಕೆಲವರು ಹೇಳುತಾರೆ. ಕೆಲವು ದಿವಸದಲ್ಲಿ ಈತನಿಗೆ ಮದುವೆಯಾಯಿತು.

ಈ ಕಾಲದಲ್ಲಿಯೇ ಶ್ರೀ ಶ್ರೀನಿವಾಸ ಬ್ರಹ್ಮತಂತ್ರ ಘಂಟಾವತಾರ ಸ್ವಾಮಿಗಳವರು ಪರಕಾಲಮಠಕ್ಕೆ ಅಧಿಪತಿಗಳಾಗಿದ್ದರು. ಇವರು ಸ್ವತಃ ಪಂಡಿತರು, ತ್ರಿಯಂಬಕಶಾಸ್ತ್ರಿಗಳೇ ಮೊದಲಾದವರಲ್ಲಿ ವಾಕ್ಯಾರ್ಥವನ್ನುಮಾಡಿ ಶ್ರಿಮಂತ

ಠೇಶ್ವೆ ಬಾಜಿರಾಯರ ಮಹಾಸಭೆಯಲ್ಲಿ ಬಹುಮಾನವನ್ನು ಹೊಂದಿ ಬಂದವರು. ಇಂಥಾ ಸ್ವಾಮಿಗಳು ರಾಮಶಾಸ್ತ್ರಿಗಳ ಯೋಗ್ಯತೆಯನ್ನು ಮೆಚ್ಚಿ ಮಠದ ವಿದ್ವಾಂಸವೇತನವೆಂದು ೧೫ ರೂಪಾಯಿಯನ್ನು ರಾಮಶಾಸ್ತ್ರಿಗಳಿಗೆ ಮಾಸಾಶನಮಾಡಿಕೊಟ್ಟರು. ನಂಜನಗೂಡಿನ ಸುಮತೇಂದ್ರ ಮಠದಿಂದ ೨೫ ರೂಪಾಯಿ, ಸೋಸಲೇ ವ್ಯಾಸರಾಯ ಮಠದಿಂದ ೨೫ ರೂಪಾಯಿ ರಾಮಶಾಸ್ತ್ರಿಗಳಿಗೆ ವರ್ಷಾಶನ ನಡೆಯುತಾ ಇತ್ತು. ಈ ಸ್ವಾಮಿಗಳು ವೈಷ್ಣವ ಮತಾವಲಂಬಿಗಳು, ರಾಮಶಾಸ್ತ್ರಿಗಳು ಸ್ಮಾರ್ತರು. ದ್ವೈತವಿಶಿಷ್ಟಾದ್ವೈತಮತಗಳಿಗೆ ತೌರುಮನೆಯಾದ ಈ ಮಠಗಳಿಂದಲೂ ಬಹುಮಾನವನ್ನು ಪಡೆದ ನಮ್ಮ ಶಾಸ್ತ್ರಿಗಳ ಯೋಗ್ಯತೆಯನ್ನು ಹೊಗಳುವುದಕ್ಕೂ ನನಗೆ ಶಕ್ತಿ ಇಲ್ಲ. ಗುಣೈಕಪಕ್ಷಪಾತಿಗಳಾಗಿ ವಿದ್ಯಾವೈಖರಿಯಲ್ಲಿ ದೃಷ್ಟಿಯಿಟ್ಟು ಮತವೈಷಮ್ಯವನ್ನು ಶುದ್ಧವಾಗಿ ಮರೆತು ಬಹುಮಾನವನ್ನು ತೋರಿಸಿದ ಆ ಯತಿಶ್ರೇಷ್ಠರುಗಳ ಧಾರಾಳವಾದ ಮನಸ್ಸನ್ನು ಕೊಂಡಾಡುವುದಕ್ಕೂ ನನಗೆ ಯೋಗ್ಯತೆ ಇಲ್ಲ. ಆ ಯೋಗ್ಯತೆಯನ್ನೂ ಈ ಧಾರಾಳವನ್ನೂ ತೂಕಮಾಡತಕ್ಕ ತಕ್ಕಡಿಯಾವುದೋ ಅರಿಯೆ. ಆ ದಂಡಿಯನ್ನು ಹಿಡಿಯುವ ಸೆಟ್ಟಿ ಯಾರೋ ಕಾಣೆ.

ಮೈಸೂರಿನಲ್ಲಿ ದಕ್ಷಿಣಭಾಗದಲ್ಲಿ ದೊಡ್ಡಕೆರೇ ಹಿಂದೆ ಹಳೇ ಅಗ್ರಹಾರವೆಂದು ಇದೆ. ಅಲ್ಲಿ ಪೂರ್ಣಯ್ಯನ ಛತ್ರ ವೆಂದು ಹೆಸರಾಗಿರುವ ಸರ್ಕಾರದ ಹಳೇ ಸತ್ರವಿದೆ. ಅದು ಇರುವ ಬೀದಿಗೆ ಛತ್ರದಬೀದಿ ಎಂದು ಹೆಸರು. ಆ ಬೀದಿ ಯಲ್ಲಿ ರಾಮಶಾಸ್ತ್ರಿಗಳು ಒಂದು ಮನೆಯನ್ನು ಕೊಂಡು ಕೊಂಡು ಅಲ್ಲಿ ವಾಸವಾಗಿದ್ದರು.

ಈ ಮನೆಯು ತಂಜಾವೂರು ನಾಯಕನಿಗೆ ಸೇರಿತ್ತು. ತಂಜಾವೂರ ಸಂಸ್ಥಾನದಲ್ಲಿ ಆಳುತಾ ಇದ್ದ ಮರಾಟೆ ರಾಜ್ಯ ದಲ್ಲಿ ದೊರೆಗೆ ಗಂಡುಸಂತಾನ ವಿರಲಿಲ್ಲ. ಆಗಲೂ ಅಧಿ ರಾಜರಾಗಿ ವರ್ತಿಸುತಾ, ಹಿಂದುಸ್ಥಾನದ ಅನೇಕ ರಾಜವಾಡೆ ಗಳನ್ನು ತಮಗೆ ಅಧೀನರಾಜ್ಯವಾಗಿ ಮಾಡಿಕೊಂಡಿದ್ದ ಬ್ರಿಟಿಷ್ ಕಂಪನಿ ಸರ್ಕಾರದವರು ವಂಶನಷ್ಟವಾಗಿರುವ ತಂಜಾವೂರ ದೊರೆಗಳಿಗೆ ಸಂತಾನಾಭಿವೃದ್ಧಿಗಾಗಿ ಪುತ್ರ ಸ್ವೀಕಾರವಾಗಕೂಡದು ಎಂತಲೂ, ಆಗಿದ್ದ ದೊರೆಯಕಾಲಾ ನಂತರ ತಂಜಾವೂರ ಸಂಸ್ಥಾನವು ಕಂಪನೀ ಸರ್ಕಾರಕ್ಕೇ ಸೇರಬೇಕೆಂತಲೂ ಚರ್ಚೆ ನಡಿಸುತಾ ಇದ್ದರು. ಕಾಲೋ ಚಿತವಾದ ಮರ್ಯಾದೆ ಅನುಸರಿಸಿ ಮೈಸೂರ ರಾಜರ ಆಸ್ಥಾ ನಕ್ಕೆ ತಂಜಾವೂರ ಸಂಸ್ಥಾನದಿಂದ ಮೇಲೆಕಂಡ ನಾಯ ಕನು ರಾಯಭಾರಿಯಾಗಿ ಬಂದಿದ್ದನು. ಆತನು ರಾಮ

ಶಾಸ್ತ್ರಿಗಳ ಪ್ರಭಾವವನ್ನು ಕೇಳಿ ಇವರಿಂದ ಸುಮಾರು ೪೦೦ ರೂಪಾಯಿ ತೆಗೆದುಕೊಂಡು ತನ್ನಮನೆಯನ್ನು ಶಾಸ್ತ್ರಿಗಳಿಗೆ ಕೊಟ್ಟನು. ಈ ಮನೆಯು ಉತ್ತರಾದಿಮಠದ ಪಕ್ಕದಲ್ಲಿದೆ. ಈಚೆಗೆ ಅದರಲ್ಲಿ ಶಾಸ್ತ್ರಿಗಳ ಅಂಣನಮಗಳ ಮಗನು ವಾಸವಾಗಿದ್ದರಂತೆ. ಆ ತರುವಾಯ ಈ ಮನೆಯನ್ನು ಸರಿಮಾಡಿಸಿ ಶುಚಿಯಾಗಿ ಇಟ್ಟಿದಾರೆ. ಇದನ್ನು ಒಂದು ಧರ್ಮಕಾರ್ಯಕ್ಕೆ ಉಪಯೋಗಿಸಬೇಕೆಂದು ರಾಮಶಾಸ್ತ್ರಿಗಳ ಪೌತ್ರರಾದ ಧರ್ಮಾಧಿಕಾರಿ ರಾಮಶಾಸ್ತ್ರಿಗಳು ಯೋಚಿಸಿದಾರೆಂದು ತಿಳಿಯುಬರುತ್ತೆ.

ಇದೂ ಅಲ್ಲದೆ ಈ ಮನೆಯನ್ನು ತಂಜಾವೂರು ನಾಯಕನು ಮಾರಿಕೊಳ್ಳಲು ಇನ್ನೂ ಒಂದು ಕಾರಣ ಉಂಟಾಯಿತೆಂದು ತಿಳಿಯುಬರುತ್ತೆ. ಖರ (ಸ್ರ್ೞ೧೮೩೦-೩೧) ಸಂವತ್ಸರದಲ್ಲಿ ಮೈಸೂರ ಸಂಸ್ಥಾನದ ದೌಲತ್ತನ್ನು ಕಂಪನೀ ಸರ್ಕಾರದವರು ತಮ್ಮ ಕೈವಶಮಾಡಿಕೊಂಡರು. ದೊರೆಗಳಾದ ಕೃಷ್ಣರಾಜ ಒಡೆಯರವರ ವೆಚ್ಚಕ್ಕಾಗಿ ತಿಂಗಳು ೧ಕ್ಕೆ ಸುಮಾರು ೩೫೦೦೦ ರೂಪಾಯಿಯನ್ನು ಕೊಡುವುದಾಗಿ ನಿಷ್ಕರ್ಷೆಯಾಯಿತು. ಜಗತ್ತಿಗೆಲ್ಲಾ ಹರಡಿಕೊಂಡಿದ್ದ ಆ ಮಹಾರಾಜನ ಔದಾರ್ಯಕ್ಕೂ ಗೌರವಕ್ಕೂ ಹಣ ಸಾಲದೆ ಇಕ್ಕಟ್ಟಾಯಿತು. ಪೂರ್ವದಲ್ಲಿ ದೌಲತ್ತು

ಇದ್ದಾಗ ಕೊನೆಕೊನೆಯಲ್ಲಿ ವೆಂಕಟೇ ಅರಸು ದಿವಾನಗಿರಿ ಮಾಡುತಾ ಇದ್ದನು. ಈತನ ಹಿರೀ ತಮ್ಮ ತಿಮ್ಮಪ್ಪ ರಾಜೆ ಅರಸಿಗೆ ನಂದೀದುರ್ಗದ ಫೌಸುದಾರಿ ಇತ್ತು. ಎರ ಡನೇ ತಮ್ಮನಾದ ದಾಸಪ್ಪಾಜಿಯು ಅರಮನೆಯಲ್ಲಿ ಸರ ಮೊಖ್ತೇಸರನಾಗಿದ್ದನು. ಎಲ್ಲಾ ಇಲಾಖೆಯಮೇಲೆಯೂ ಈ ತನ ಕಾರುಬಾರು ನಡೆಯುತಾ ಇತ್ತು. ಮುಜರಾಯಿ ಇಲಾ ಖೆಯ ಖರ್ಚು ಹೆಚ್ಚಾಗಿದ್ದ ಕಾರಣ, ದಾಸಪ್ಪಾಜಿಯು ಅದ ನ್ನು ಕಮ್ಮಿಮಾಡಿ ಏರ್ಪಾಡು ಮಾಡಿದನು. ಮುಜರಾಯಿ ಇಲಾಖೆಯಲ್ಲಿ ದಾಸಪ್ಪಾಜಿಯುವರ ಲವಾಜಮೆ ಎಂದು ಈಗಲೂ ಹೆಸರಾಗಿದೆ. ಈತನು ಸ್ವಯಂ ಸಂಸ್ಕೃತದಲ್ಲಿ ಯೂ ಕನ್ನಡದಲ್ಲಿಯೂ ಪಂಡಿತನಾಗಿದ್ದ ಕಾರಣ, ಅನೇಕ ಪಂಡಿತರಿಗೆ ಆಶ್ರಯಭೂತನಾಗಿದ್ದನು; ಲೌಕಿಕ ಸಂಧಾ ನದಲ್ಲಿ ಕೇವಲ ಘಟಕನೆನ್ನಿಸಿಕೊಂಡಿದ್ದನು. ವೆಂಕಟೇ ಅರಸಿನ ಮೂರನೇ ತಮ್ಮನಾದ ನಾರಾಯಣರಾಜೇ ಅರಸು ದೊರೆಯ ಸಮೀಪದಲ್ಲಿಯೇ ಯಾವಾಗಲೂ ಇರುತ್ತಾ, ಅಣ್ಣಂದಿರನ್ನು ದೊರೆಯಲ್ಲಿ ದೂಷಿಸುತಾ, ದರಬಾರಿನಲ್ಲಿ ಒಳಗೂ ಹೊರಗೂ ಓಡಾಡಿಕೊಂಡು, ಅಣ್ಣಂದಿರಿಗೆ ವಿ ರೋಧವಾಗಿ ನಡೆಯತಕ್ಕ ಸಂದರ್ಭಗಳನ್ನು ಅವರಿಗೆ ತಿಳಿ ಸುತ್ತಾ ಹಿತಶತ್ರುವಾಗಿದ್ದನು. ಈ ನಾಲ್ಕುಜನ ಸಹೋ

ದರರ ಹಾವಳಿಯು ರಾಜ್ಯದಲ್ಲಿ ಸಹಿಸಲು ಅಸಾಧ್ಯವಾಗಿ ತ್ತು. ಇವರು ಸ್ವದೇಶೀಯರಾಗಿ ರಾಜಬಂಧುಗಳಾಗಿ ಇ ದಾಗ್ಯೂ, ಇವರಿಗೆ ದೂರದೃಷ್ಟಿ ಕಡಮೆಯಾಗಿತ್ತು. ಮ ರಾಟೇ ಸೀಮೆಯಿಂದ ಬಂದು ಈ ದೇಶದಲ್ಲಿ ದೊಡ್ಡ ಅ ಧಿಕಾರಗಳನ್ನು ಮಾಡಿಕೊಂಡು, ಸಂಪಾದನೆಮಾಡಿ ದೋ ಚಿಕೊಂಡು ಹೊರಟುಹೋಗಲು ನೆಲಸಿದ್ದ ಕೆಲವು ಮರಾಟೆ ದೇಶಸ್ಥಬ್ರಾಹ್ಮಣರೂ ಸಹಿತ ಮೇಲೆಕಂಡ ದುಷ್ಟಚತು ಷ್ಟಯದ ಜೊತೆಗೆ ಸೇರಿಕೊಂಡಿದ್ದರು.

ಇಂಥಾ ಕೆಟ್ಟ ಅಧಿಕಾರಿಗಳ ತುಂಟತನವು ಬಲವಾ ದ್ದರಿಂದಲೇ ಮೈಸೂರ ಸೀಮೆಯಲ್ಲಿ ಕೆಲವು ಪುಂಡು ಪಾಳ ಯಗಾರರು ದಂಗೆ ಎಬ್ಬಿಸಿದರು. ರೈತರೆಲ್ಲಾ ಸೇರಿ ಮಾನಾ ಡು ಮೆತ್ತು. ಮೈಸೂರ ಸೀಮೆಯನ್ನು ಕಂಪನಿ ಸರ್ಕಾರ ದವರು ಹೇಗಾದರೂ ಸೇರಿಸಿಕೊಂಡರೆ, ಆಂಧ್ರ, ಕೊಂಗ, ಮಹಾರಾಷ್ಟ್ರ ಮೊದಲಾದ ಅನ್ಯದೇಶೀಯರಿಗೆ ದೊಡ್ಡಪದವಿ ಸಿಕ್ಕುವುದೆಂತಲೂ ಅದರಿಂದ ಅವರು ದೊಡ್ಡೋಕ್ಕಲಾಗಲು ಅನುಕೂಲವಾಗುತ್ತೆಂತಲೂ ಎಣಿಸಿ, ಕೆಲವು ಅಧಿಕಾರಿಗಳು ಮೈಸೂರಿನ ದೌಲತನ್ನು ಕೃಷ್ಣರಾಜ ಒಡೆಯರ ಕೈತಪ್ಪಿ ಸುವುದಕ್ಕೆ ಇಲ್ಲದ ಛದ್ಮನೆಗಳನ್ನು ನಡಿಸುತಾ, ಜನರನ್ನು ಗುಂಪಮೆಬ್ಬಿಸಿದರೆಂದು ಚೆನ್ನಾಗಿ ತಿಳಿಯಬರುತ್ತೆ. ಇದೇ

ಮೊದಲಾದ ಕಾರಣಗಳಿಂದ ದೌಲತ್ತು ಕಂಪನಿ ಸರ್ಕಾರದ ಸುಫರ್ದಾಯಿತು.

ಮೇಲೆ ಹೇಳಿದ ನಾಲ್ಕುಜನ ಅರಸುಗಳೂ ಪಂಚ ತಂತ್ರದ ಕರಟಕದಮನಕರ ನಿಜವಾದ ಅವತಾರವಾಗಿದ್ದ ರೆಂದು ಜನರು ನಂಬಿದ್ದರು. ಹೇಗಾದರೂ ಆಗಲಿ, ಲೌ ಕಿಕ ಸಂಧಾನದಲ್ಲಿ ಈ ನಾಲ್ಕುಜನ ಅರಸರೂ ಶಕ್ತರಾಗಿ ದ್ದರು. ದೌಲತ್ತು ಹೋದಮೇಲೆಯೂ ಇವರು ಕೃಷ್ಣ ರಾಜ ಒಡೆಯರವರಮೇಲೆ ಬಹಳವಾಗಿ ಕೃತ್ರಿಮಗಳನ್ನು ನಡಿಸಿದರು. ಆದರೆ ಆ ಮಹಾರಾಯನ ಸತ್ಯವಾದ ನಡತೆ ಯಿಂದ ಇದೆಲ್ಲವೂ ತೃಣವಾಗಿ ದಹಿಸಿಹೋಯಿತು. ಈ ಸಮೋದರರ ಆಶ್ರಯದಲ್ಲಿದ್ದು ಅವರಿಗೆ ಆಪ್ತನಾಗಿ ಅಡಳ ತಗಳನ್ನೆಲ್ಲಾ ತಿಳಿದುಕೊಂಡಿದ್ದ ಮತ್ತೊಬ್ಬ ವೆಂಕಟಪ್ಪಾಜಿ ಅರಸು ದೊರೆಯಲ್ಲಿ ವಿಶೇಷವಾಗಿ ಓಡಿಯಾಡುತಾ ಅಂತ ರ್ಯಕ್ಕೆ ಸೇರಿಕೊಂಡನು. ಈತನಿಗೆ ಸ್ವಲ್ಪವಾಗಿ ಇಂಗ್ಲಿಷು ಬರುತಾ ಇತ್ತಂತೆ. ಇದರಿಂದ ಈತನಿಗೆ ಇಂಗ್ರೇಜಿ ವೆಂಕ ಟಪ್ಪಾಜಿ ಎಂದು ಹೆಸರಾಗಿತ್ತು. ಕೃಷ್ಣರಾಜ ಒಡೆಯರಿಗೆ ದೌಲತ್ತನ್ನು ಪುನಃ ಕೊಟ್ಟುಬಿಡಬೇಕೆಂತಲೂ, ತಿಂಗಳು ೧ಕ್ಕೆ ಕಂಪನಿಯವರು ದೇಶದ ಹುಟ್ಟುವಳಿಯಲ್ಲಿ ಕೊಡುತಾ ಇದ್ದ ೧೨,೦೦೦ ೯. ವರಹವು ಖರ್ಚಿಗೆ ಸಾಲದೆ ಇದ್ದಕಾರಣ,

ಪಾಂಚವಿಹಿಸ್ಸೆ ಎಂದರೆ ರಾಜ್ಯದ ಹುಟ್ಟುವಳಿಯಲ್ಲಿ ಐದ ರಲ್ಲಿ ಒಂದು ಭಾಗವನ್ನು ನಮ್ಮ ದೊರೆಗಳಿಗೆ ಕೊಡಿಸುತಾ ಬರಬೇಕೆಂತಲೂ ಕಂಪನಿ ಸರ್ಕಾರಕ್ಕೂ ಮಹಾರಾಜರಿಗೂ ಕರೀತ ನಡೆಯುತಾ ಇತ್ತು. ತಕ್ಕ ಜನರನ್ನು ಕಟ್ಟಿ ಕೊಂಡು ಈ ಕಾರ್ಯವನ್ನು ಸಾಧಿಸಲು ಇಂಗ್ರೀಜಿ ವೆಂಕಟ ಪ್ಪಾಜಿಯು ರಾಜರ ಕ್ಷೇಮಕ್ಕಾಗಿಯೂ ಸ್ವದೇಶೀಯರ ಉಪ ಕಾರಾರ್ಥವಾಗಿಯೂ ಉಜ್ಜುಗಿಸಿದನು.

ಕೃಷ್ಣರಾಜ ಒಡೆಯರವರು ದೌಲತ್ತುಮಾಡುತಿದ್ದಾಗ್ಗೆ ಕಂಪೆನಿ ಸರ್ಕಾರದವರ ನಿರ್ಬಂಧ ವಿಶೇಷವಾಗಿ ಇರ ಲಿಲ್ಲ. ಕಂಪೆನಿಯವರಕಡೆ ರೆಸಿಡೆಂಟ್ ಎಂಬ ಅಧಿಕಾ ರಿಯು ಇದ್ದುಕೊಂಡು, ರಾಜರು ಕಂಪೆನಿಯವರಿಗೆ ವಿರೋ ಧವಾದ ಆಚರಣೆಯನ್ನು ನಡಿಸನಂತೆ ನೋಡಿಕೊಳ್ಳುತ ಎಂದಿನಂತೆ ಇದ್ದದು ನಿಜ. ಆದರೆ ಈ ಅಧಿಕಾರಿಯು ಪರರಾಜ್ಯದ ರಾಯಭಾರಿಯಂತೆ ಇದ್ದನು. ದೇಶೀಯ ಸಂ ಸ್ಥಾನಗಳ ಅರಸರು ಪರಸ್ಪರ ಪೊಕ್ಕು ಹೊರಟು, ಬೇಕಾ ದ ವಿಷಯಗಳಲ್ಲಿ ಒಬ್ಬರಿಗೊಬ್ಬರು ಲೇಖನಗಳನ್ನು ಬರೆ ಯುತಾ ಬಳಕೆಯನ್ನು ಇಟ್ಟುಕೊಂಡು ರಾಯಭಾರಿಗಳನ್ನೂ ಸ್ವತಂತ್ರಿಸಿ ಕಳುಹಿಸುತಿದ್ದರು. ಇದರಂತೆ ತಂಜಾವೂರು ನಾ ಯಕನು ತಂಜಾವೂರ ಸಂಸ್ಥಾನದಿಂದ ವಕೀಲನಾಗಿ ಬಂದು

ರಾಜಮರ್ಯಾದೆ ಪ್ರಕಾರ ವೆಂಕಟಪ್ಪಾಜಿಯನ್ನು ಅನುಸರಿಸುತಾ ದೊರೆಗಳ ಭೇಟಿಯನ್ನು ಮಾಡಿಕೊಳ್ಳುತಾ ಇದ್ದನು.

ಆ ಕಾಲದಲ್ಲಿ ಜನರಲ್ ಕಬ್ಬನ್‌ಸಾಹೇಬನು ಮೈಸೂರ ಸೀಮೆಯ ರಾಜ್ಯಭಾರದ ಆಡಳಿತವನ್ನು ನಡಿಸಲು ಕಮಿಷ್ನರನಾಗಿದ್ದನು. ಆ ಸಮಯದಲ್ಲಿ ಇಂಗ್ಲಿಷರಿಗೂ ಮತ್ತು ಆಫ್ಘನರು, ಮರಾಟೆಯವರು, ಸಿಕ್ಕರು, ಇವರುಗಳಿಗೂ ಯುದ್ಧಪ್ರಸಕ್ತಿ ಜರುಗುತಲೇ ಇತ್ತು. ಅಂಥಾ ಸಮಯಗಳಲ್ಲಿ ಕಂಪೆನಿಯವರು ರಾಜವಾಡೆಗಳನ್ನು ಹೆಚ್ಚಿನ ಜಾಗರೂಕತೆಯಿಂದ ನೋಡಿಕೊಳ್ಳುತಿದ್ದರು.

ಈ ಸಂದರ್ಭದಲ್ಲಿ ತಂಜಾವೂರು ನಾಯಕನು ಆ ಸಂಸ್ಥಾನದಿಂದ ಬಂದು, ಮೈಸೂರಲ್ಲಿ ನಿಂತು ವೆಂಕಪ್ಪಾಜಿ ಮೊದಲಾದವರಲ್ಲಿ ಸೇರಿ ಕಂಪೆನಿಯವರಮೇಲೆ ಏನೋ ವಿರೋಧವಾದ ಸಂಧಾನವನ್ನು ನಡಿಸುತಾನೆಂದು ಅನುಮಾನತಟ್ಟಿದಕಾರಣ, ಕಂಪನಿ ಸರ್ಕಾರದವರು ವೆಂಕಟಪ್ಪಾಜಿ ತಂಜಾವೂರ ನಾಯಕ ಮೊದಲಾದವರನ್ನು ಅಕಸ್ಮಾತ್ತಾಗಿ ಬೆಂಗಳೂರಿಗೆ ಸಾಗಿಸಿ ನಸರುಬಂದಿಯಲ್ಲಿಟ್ಟರು. ಸುಮಾರು ಆ ಕಾಲದಲ್ಲಿ ತಂಜಾವೂರು ನಾಯಕನು ಆತುರನಾಗಿ ಮನೆಯನ್ನು ಮಾರಿಕೊಂಡಕಾರಣ, ಅದು ರಾಮಶಾಸ್ತ್ರಿಗಳಿಗೆ ದೊರೆಯಿತು.

ಮೈಸೂರ ಸಂಸ್ಥಾನದಲ್ಲಿ ಆಗ್ಗೆ ನಡೆದ ರಾಜಕೀಯ ವ್ಯಾಪಾರಗಳಿಗೂ ರಾಮಶಾಸ್ತ್ರಿಗಳ ಪಾಂಡಿತ್ಯಕ್ಕೂ ಸಂಬಂಧ ವೇನು ? ಎಂದು ಕೆಲವರು ಶಂಕಿಸಬಹುದು. ರಾಜ್ಯದ ಸ್ಥಿತಿಯು ಆ ಕಾಲದಲ್ಲಿ ಹೇಗೆ ಇತ್ತೋ ಅದು ಮುಂದಿನ ಕಥಾಸರಣಿಗೆ ಸಂಬಂಧಿಸುವುದು. ಮಹಾರಾಜರಿಗೆ ವರ ಮಾನ ಕಡಮೆಯಾದ್ದಕ್ಕೆ ಕಾರಣವನ್ನು ಸಂಕ್ಷೇಪವಾಗಿ ತೋರಿಸಿದೆ. ಅದು ಹಾಗೆ ಕೊರತೆಗೆ ಬಾರದೆ, ದೊರೆಗೆ ದೌಲತ್ತು ಇದ್ದರೆ, ರಾಮಶೇಷಶಾಸ್ತ್ರಿಗಳು, ಕುಟ್ಟಿಶಾಸ್ತ್ರಿಗಳು, ಅನವಟ್ಟಿ ಶ್ರೀನಿವಾಸಾಚಾರ್ಯರು, ಚಲಪತಿ ಕೃಷ್ಣಾಚಾರ್ಯರು, ರಾಜೇಶ್ವರಶಾಸ್ತ್ರಿಗಳು ಇವರೇ ಮೊದಲಾದ ಮಹಾಪಂಡಿತರು ಗಳಿಗೆ ವಿಶೇಷವಾಗಿ ಬಹುಮಾನವನ್ನೂ ಸ್ವಾಸ್ಥ್ಯಗಳನ್ನೂ ಜಹಗೀರುಗಳನ್ನೂ ಕೊಟ್ಟಂಥಾ ಮಹಾರಾಜನು ಒಂದು ವಿಷಯದಲ್ಲಿ ಇವರೆಲ್ಲರಿಗಿಂತಲೂ ದೊಡ್ಡಪಂಡಿತರಾದ ರಾಮ ಶಾಸ್ತ್ರಿಗಳಿಗೆ ಅಂಥಾ ಉಪಪತ್ತಿಯನ್ನು ಕಲ್ಪಿಸಿಕೊಡದೆ ಇರುತಿರಲಿಲ್ಲ. ದೊರೆಯು ದೌಲತ್ತು ಹೋದಮೇಲೆ ಜಹ ಗೀರುಗಳನ್ನು ಕೊಡಕೂಡದೆಂತ ಕಂಪನಿಯವರು ನಿಷ್ಕ ರ್ಷೆಮಾಡಿದರು. ಈ ಕಾರಣಗಳಿಂದ ನಮ್ಮ ಶಾಸ್ತ್ರಿಗಳ ಯೋಗ್ಯತೆಗೆ ಎಷ್ಟು ವರಮಾನ ದೊರೆಯಬೇಕೋ ಅಷ್ಟು ದೊರೆಯಲಿಲ್ಲ. ಇದಕ್ಕಾಗಿ ಆಗಿದ್ದ ರಾಜ್ಯಭಾರ ಕ್ರಮವು

ಸ್ವಲ್ಪ ಜ್ಞಾಪಕದಲ್ಲಿರಬೇಕಾದ್ದು ಅಗತ್ಯವೆಂದು ಆ ಸಂಗತಿಗಳನ್ನು ಸ್ವಲ್ಪಮಟ್ಟಿಗೆ ವಿಸ್ತರಿಸಬೇಕಾಯಿತು.

ರಾಮಶಾಸ್ತ್ರಿಗಳು ದೊರೆತದ್ದರಲ್ಲಿ ತೃಪ್ತರಾಗಿ ಸದ್ವ್ಯಾಸಂಗಕ್ಕೆ ಕೊರತೆಯನ್ನು ಮಾಡದೆ ಸುಖವಾಗಿರುತಿದ್ದರು.

---

## ೫ನೇ ಅಧ್ಯಾಯ

### ಮೈಸೂರ ವಾಸ—ಶಿಷ್ಯ ಸಂಪತ್ತು.

---

ಮೈಸೂರ ಮನೆಯಲ್ಲಿ ರಾಮಶಾಸ್ತ್ರಿಗಳು ವಾಸವಾಗಿ ಇದ್ದರು. ಗುರುಕುಲವಾಸವೆಲ್ಲಾ ಮುಗಿಯಿತು. ಇವರ ಪಾಂಡಿತ್ಯವನ್ನೂ ವಾಗ್ಧೋರಣೆಯನ್ನೂ ಬೋಧಕತಾಶಕ್ತಿಯನ್ನೂ ನೋಡಿ ಮೆಚ್ಚಿ ಅನೇಕಜನ ಶಿಷ್ಯರು ಪಾಠಕ್ಕಾಗಿ ಬಂದುಸೇರಿದರು. ಶಾಸ್ತ್ರಿಗಳ ಪ್ರಖ್ಯಾತಿಯು ಹರಡಿದ ಹಾಗೆಲ್ಲಾ ಪರಸ್ಥಳದ ವಿದ್ಯಾರ್ಥಿಗಳು ಬಂದು ಒದಗಿದರು. ಸ್ವಯಂ ಸ್ಮಾರ್ತರು; ವೈಷ್ಣವರಾದ ತಿರುಪತಿ ಶ್ರೀನಿವಾಸಾಚಾರ್ಯರಿಗೆ ಶಿಷ್ಯರು, ಇವರ ಪಾಂಡಿತ್ಯವನ್ನು ಮೆಚ್ಚಿಕೊಂಡಿದ್ದ ಶ್ರೀವೈಷ್ಣವಶಿಖಾಮಣಿಗಳಾದ ಪರಕಾಲಸ್ವಾಮಿಗಳಿಂದ ವಿದ್ವಾಂಸವೇತನವನ್ನು ಮಾಸಾಶನರೂಪವಾಗಿ ಹೊಂದತಕ್ಕವರು: ಹೀಗೆ ಸರ್ವ ಮತಕ್ಕೂ ಸಮ್ಮತವಾದ

ಚರಿತ್ರೆಯುಳ್ಳ ರಾಮಶಾಸ್ತ್ರಿಗಳಲ್ಲಿ ಮತವೈಷಮ್ಯವೇನೂ ಇರಲಿಲ್ಲ. ಮೂರು ಮತಕ್ಕೂ ಸೇರಿದ ಶಿಷ್ಯರು ಅನೇಕರು ಇವರಲ್ಲಿ ಶಾಸ್ತ್ರವ್ಯಾಸಂಗ ಮಾಡುತಾ ಇದ್ದರು. ಈ ಶಿಷ್ಯರಲ್ಲಿ ಪರಸ್ಥಳದವರು ಅನೇಕರು ಭುಕ್ತಿಗೆ ಮಾರ್ಗವಿಲ್ಲದೆ ತಾಪತ್ರಯಪಡುವರೆಂದು ಕನಿಕರದಿಂದ ಶಾಸ್ತ್ರಿಗಳು ಅನೇಕ ಜನ ವಿದ್ಯಾರ್ಥಿಗಳಿಗೆ ತಮ್ಮ ಮನೆಯಲ್ಲಿಯೇ ಎರಡು ಹೊತ್ತೂ ಅನ್ನವನ್ನು ಹಾಕಿ ಒಬ್ಬೊಬ್ಬರಿಗೆ ವರುಷಕ್ಕೆ ಒಂದು ಜೊತೆ ಪಂಚೆಯನ್ನು ಕೊಡಿಸುತಾ ಇದ್ದರು.

ಹೀಗೆ ಪಂಡಿತರುಗಳೇ ವಿದ್ಯಾರ್ಥಿಗಳಿಗೆ ಅನ್ನವನ್ನು ಹಾಕಿ ಪಾಠವನ್ನು ಹೇಳುತಾ ಇದ್ದದೂ ಅಲ್ಲದೆ, ಲೌಕಿಕಾಧಿಕಾರಿಗಳು ಅನೇಕರು ತಂತಮ್ಮ ಮನೆಗಳಲ್ಲಿ ನೂರಾರು ಜನ ವಿದ್ಯಾರ್ಥಿಗಳಿಗೆ ಎರಡು ಹೊತ್ತೂ ಅನ್ನವನ್ನು ಹಾಕುತಾ ವಿದ್ಯಾಭಿವೃದ್ಧಿಯನ್ನು ಮಾಡುತಾ ಇದ್ದರು. ಮಾಗಡಿಯಲ್ಲಿ ಬಹಳ ದೊಡ್ಡ ಪಂಡಿತರಾದ ಮಹಾದೇವಶಾಸ್ತ್ರಿಗಳಲ್ಲಿ ಅನೇಕ ಜನ ಶಿಷ್ಯರು ವ್ಯಾಸಂಗಮಾಡುತಾ ಇದ್ದರು. ಇವರ ಸಂಖ್ಯೆ ವರ್ಷ ವರ್ಷ ಹೆಚ್ಚುತಾ ಇತ್ತು. ಇವರಿಗೆಲ್ಲಾ ಮಾಗಡಿಯಲ್ಲಿದ್ದ ಕರಣೀಕ ಕೃಷ್ಣಪ್ಪನವರ ಮನೆಯಲ್ಲಿ ಹಗಲೂ ರಾತ್ರಿಯೂ ಊಟವಾಗುತಾ ಇತ್ತು.

ಈಶ್ವರ ಪ್ರೀತಿಯಾಗಿ ಭಕ್ತಿಯಿಂದ ಕೃಷ್ಣಪ್ಪನವರು ಈ ಧರ್ಮಕಾರ್ಯವನ್ನು ಮಾಡುತಾ ಇದ್ದರು. ರಾತ್ರಿ ಕಾಲದಲ್ಲಿ ವಿದ್ಯಾರ್ಥಿಯಾರಾದರೂ ಭೋಜನಕ್ಕೆ ಬರುವುದು ಹೊತ್ತಾದರೆ, ಕೃಷ್ಣಪ್ಪನವರು ತಾವೇ ಪಂಜನ್ನು ಹಿಡಿಸಿಕೊಂಡು ಹೋಗಿ ಹುಡುಕಿ ವಿದ್ಯಾರ್ಥಿಗಳನ್ನು ಉಪಚರಿಸಿ ಕರೆದು ತಂದು ಊಟಮಾಡಿಸುತಾ ಇದ್ದರು.

ಮೈಸೂರಲ್ಲಿ ಭಾಗವತ ಸುಬ್ಬರಾಯರೆಂಬ ದೊಡ್ಡ ಮನುಷ್ಯರೂ ಇಂಥಾ ಪುಣ್ಯಾತ್ಮರೇ ಆಗಿದ್ದರು. ಇವರು ತಮ್ಮ ಒಂದು ದೊಡ್ಡಮನೆಯನ್ನು ಪಾಠಶಾಲೆಗಾಗಿಯೇ ಬಿಟ್ಟಿದ್ದರು. ಈ ಮನೆಯಲ್ಲಿ ಅಧ್ಯಾಪಕರು ವಾಸವಾಗಿದ್ದು ಕೊಂಡು ವಿದ್ಯಾರ್ಥಿಗಳಿಗೆ ವೇದವನ್ನು ಅಧ್ಯಯನಮಾಡಿಸು ತಾ ಇದ್ದರು. ಮೈಸೂರಲ್ಲಿದ್ದ ಅನೇಕ ಇತರ ಪಂಡಿತರು ಗಳಲ್ಲಿ ಇತರ ಶಾಸ್ತ್ರಗಳನ್ನು ಶಿಷ್ಯರು ವ್ಯಾಸಂಗಮಾಡುತಾ ಇದ್ದರು. ಇಂಥಾ ವಿದ್ಯಾರ್ಥಿಗಳಿಗೆ ನೂರು ಇನ್ನೂರು ಜನ ಗಳವರೆಗೂ ಭಾಗವತ ಸುಬ್ಬರಾಯರ ಮನೆಯಲ್ಲಿ ಎರಡು ಹೊತ್ತೂ ಅನ್ನವನ್ನು ಹಾಕಿ ಒಬ್ಬೊಬ್ಬರಿಗೂ ವರುಷಕ್ಕೆ ಒಂದು ಜೊತೆ ಪಂಚೆಯನ್ನು ಕೊಡುತಾ ಇದ್ದರು. ಈ ಭಾಗವತ ಸುಬ್ಬರಾಯರು ಬಹು ಧರ್ಮಿಷ್ಟರು. ಅನೇಕ ಕಡೆ ಸತ್ರಗಳು, ದೇವಸ್ಥಾನಗಳು, ಕೆರೆಗಳು, ಗೋತಟಾಕ

ಗಳು, ಮಂಟಪಗಳು, ಇವುಗಳನ್ನು ಕಟ್ಟಿಸಿದ್ದರು. ಅನೇಕ ಯಾಗಗಳನ್ನು ಮಾಡಿಸಿದ್ದರು. ಸ್ವತಃ ಬಹು ಕರ್ಮಠರು. ಪಂಚಪಂಚ ಉಷಃಕ್ಕಾಲಕ್ಕೆ ಎದ್ದು ನಿತ್ಯಕರ್ಮಾದಿಗಳನ್ನೂ ಪಾರ್ಥಿವಪೂಜೆಯನ್ನೂ ಜಾವಹೊತ್ತಿಗೆ ತೀರಿಸಿಕೊಂಡು ಅರ ಮನೆಗೆ ಹೋಗಿ ಅಲ್ಲಿನ ಕೆಲಸಗಳನ್ನು ನೋಡಿಕೊಂಡು ಮಧ್ಯಾಹ್ನದ ನವಪತ್ತು ಸಿಂತಮೇಲೆ ಎಂದರೆ ೧೨ ಗಂಟೆ ಯಾದಮೇಲೆ ಮನೆಗೆ ಬಂದು ಮಾಧ್ಯಾಹ್ನಿಕ ಮೊದಲಾದ್ದ ನ್ನು ಮುಗಿಸುತಿದ್ದರು. ವಿದ್ಯಾರ್ಥಿಗಳೆಲ್ಲರೂ ಭೋಜನಕ್ಕೆ ಎಡೆಯಮೇಲೆ ಕೂತಿರುವಾಗ್ಗೆ ಅವರ ಸಂಗಡ ತಾವೂ ಒಂದು ಎಲೆಯಮೇಲೆ ಕೂತುಕೊಳ್ಳುತಾ ಇದ್ದರು. ಬೇರೆ ಎಡೆಮಾಡಿಕೊಂಡು ಯಜಮಾನರ ಎಲೆ ಎಂದು ಅಗ್ರಾಸನ ದಲ್ಲಿ ಕುಳ್ಳಿರುತಿರಲಿಲ್ಲ. ತಮಗೆ ಬಡಿಸಿದಹಾಗೆಯೇ ವಿದ್ಯಾ ರ್ಥಿಗಳೆಲ್ಲರಿಗೂ ಬಡಿಸಿಸುತಿದ್ದರು. ಪಂಕ್ತಿಭೇದವಾಗಕೂಡ ದೆಂದು ಹೀಗೆ ಮಾಡುತಿದ್ದರು. ಒಂದು ದಿವಸ ಸಮೀಪ ದಲ್ಲಿಯೇ ಕೂತಿದ್ದ ಇವರ ಮಗನ ಎಳೇಬಾಯಿಗೆ ಕಾರ ವಾಗಿ ಕಂಣಿನಲ್ಲಿಯೂ ಮೂಗಿನಲ್ಲಿಯೂ ನೀರು ಸುರಿಯು ವುದಕ್ಕೆ ಮೊದಲಾಯಿತು. ಆಗ ಸುಬ್ಬರಾಯರು ಮಗನಿಗೆ ತುಪ್ಪವನ್ನು ತರಿಸಿ ಹಾಕಿಸದೆ "ನೀರಕುಡಿ, ನೀರಕುಡಿ" ಎಂದು ಹೇಳಿದರು. ಹೀಗೆ ಆತ್ಮಪೋಷಣೆಗೆ ಸ್ವಲ್ಪವೂ

ಮನಸ್ಸನ್ನು ಕೊಡದೆ ಧರ್ಮವನ್ನರಿತು ಈ ಸುಬ್ಬರಾಯರು ಸರ್ವರಲ್ಲಿಯೂ ಸಮದೃಷ್ಟಿಯನ್ನು ಇಟ್ಟುಕೊಂಡಿದ್ದರು.

ಈ ಭಾಗವತ ಸುಬ್ಬರಾಯರು ಬೊಬ್ಬೂರಕಮ್ಮೆ ಕುಲಕ್ಕೆ ಸೇರಿದವರು. ಅರಮನೆಯಲ್ಲಿರುವ ದೊರೆಗಳ ಖಾಸ ಬೊಕ್ಕಸದಲ್ಲಿ ಇವರಿಗೆ ಅಧಿಕಾರವಿತ್ತು. ದೊರೆಗಳಿಗೆ ಇವರಲ್ಲಿ ಬಹಳವಾದ ನಂಬಿಕೆ ಇತ್ತು. ಜನಾನಿ ಸಂಬಂಧದ ಕೆಲಸಗಳನ್ನೆಲ್ಲಾ ಇವರೇ ನೋಡಿಕೊಳ್ಳುತಾ ಇದ್ದರು. ಇವರಿಗೆ ರಾಣಿವಾಸದಲ್ಲಿ ಗೋಷಾ ಇರಲಿಲ್ಲ. ಸುಬ್ಬರಾಯರು ಪರೋಪಕಾರಕ್ಕೋಸ್ಕರ ಮಾಡತಕ್ಕ ಧರ್ಮಕಾರ್ಯಗಳನ್ನು ದೊರೆಗಳು ಕೇಳಿ ಸಂತೋಷಪಡುತಾ ಇದ್ದರು. ಸುಬ್ಬರಾಯರಿಗೆ ಸಾಲ ಹೆಚ್ಚಾದರೆ ಅರಮನೆಯಿಂದ ಅದನ್ನು ತೀರಿಸಿಬಿಡುತಾ ಇದ್ದರು. ಸುಬ್ಬರಾಯರೂ ಕೂಡ ಲೇಶವೂ ಸ್ವಾಮಿದ್ರೋಹವನ್ನು ಯೋಚಿಸಿದವರಲ್ಲ. ಒಡೆಯನಲ್ಲಿಯೂ ಆಳಿನಲ್ಲಿಯೂ ಸಜಾತೀಯವಾದ ಗುಣಗಳೇ ಇದ್ದಕಾರಣ, ಒಬ್ಬರನ್ನು ಒಬ್ಬರು ಮೆಚ್ಚಿಕೊಂಡಿದ್ದರು. ಮುಸಾಹೇಬ ಗಂಗಾಧರರಾಯರು ಇನ್ನೂ ಇತರ ದೊಡ್ಡ ಅಧಿಕಾರಿಗಳೂ ಸಹಿತ ಅನೇಕಜನ ವಿದ್ಯಾರ್ಥಿಗಳಿಗೂ ಅಭ್ಯಾಗತರಿಗೂ ಅನ್ನವನ್ನು ಹಾಕುತಾ ಇದ್ದರು. ಈ ಕಾಲದಲ್ಲಿ ಧನವಂತರ ಮತ್ತು ದೊಡ್ಡ ಅಧಿಕಾರಿಗಳ

ದ್ರವ್ಯ ವೆಚ್ಚವಾಗಲು ಕಾಲೋಚಿತವಾದ ಬೇರೆಬೇರೆ ದಾರಿಗಳು ಇರುವ ಕಾರಣ, ಪೂರ್ವಕಾಲದಲ್ಲಿ ನಡೆಯುತ್ತಾ ಇದ್ದ ಧರ್ಮದ ತಲಪರಗಿಗಳು ಇಂಗಿಹೋದವು.

ಈ ಸಂದರ್ಭದಲ್ಲಿ ಇನ್ನೂ ಒಂದು ಅಂಶವನ್ನು ಇಲ್ಲಿಯೇ ಸೂಚಿಸಲು ಸ್ಥಳ ಸರಿಯಾಗಿದೆ. ಆ ಧರ್ಮಿಷ್ಠರಾದ ಕೃಷ್ಣರಾಜ ಪ್ರಭುಗಳು ಇನ್ನೂ ಒಂದು ಏರ್ಪಾಡನ್ನು ಮಾಡಿದ್ದರು. ತ್ರಿಮತಸ್ಥರಾದ ಬ್ರಾಹ್ಮಣರ ಹುಡುಗರು ತಂತಮ್ಮ ಮತಗ್ರಂಥಗಳನ್ನೂ ಸರ್ವಸಾಮಾನ್ಯವಾದ ಇತರ ಮಂತ್ರಗಳನ್ನೂ ಹೇಳಿಸಿಕೊಳ್ಳಲು ತಕ್ಕಹಾಗೆ ಏರುಟವಿಸಿದ್ದರು. ತ್ರಿಣೇಶ್ವರನ ಗುಡಿಯಲ್ಲಿ ಸ್ಮಾರ್ತರಿಗೂ, ಕೃಷ್ಣಸ್ವಾಮಿ ಗುಡಿಯಲ್ಲಿ ವೈಷ್ಣವರಿಗೂ, ವರಾಹಸ್ವಾಮಿ ಗುಡಿಯಲ್ಲಿ ಶ್ರೀವೈಷ್ಣವರಿಗೂ ಹೀಗೆ ಪಾಠವನ್ನು ಹೇಳಿಸುತ್ತಾ ಇದ್ದರು. ವಿದ್ಯಾರ್ಥಿಗಳು ಅನೇಕರಿಗೆ ಅವರವರ ಯೋಗ್ಯತಾನುಸಾರವಾಗಿ ~. |||. (ಮುಪ್ಪಾಗ = ೩ ಆಣೆ ೬ ಪೈ), ~೧ (ಹಣ = ೪ ಆ. ೮ ಪೈ.) ~೧ ||. (ಹಣವಡ್ಡ = ೭ ಆಣೆ.) ಹೀಗೆ ಚಿಲ್ಲರೆಯಾಗಿ ವಿದ್ಯಾರ್ಥಿ ವೇತನವನ್ನು ಅರಮನೆಯಿಂದ ತಿಂಗಳು ತಿಂಗಳಿಗೂ ಕೊಡಿಸುತ್ತಾ ಇದ್ದರು. ಹೀಗೆ ನಮ್ಮ ಪೂರ್ವಾಚಾರವನ್ನು ಅನುಸರಿಸಿ ಸಂಸ್ಕೃತ ವ್ಯಾಸಂಗಮಾಡಿ ವಿದ್ಯವನ್ನು ಪ್ರಚುರಪಡಿ

ಸಲು ಮೈಸೂರಲ್ಲಿ ಹೆಚ್ಚಾದ ಪ್ರೋತ್ಸಾಹವಿತ್ತು. ಈಚೆಗೆ ಪ್ರಚಾರದಲ್ಲಿರುವ ಇಂಗ್ಲಿಷು ವಿದ್ಯಾಪ್ರಾಬಲ್ಯಕ್ಕಾಗಿ ಜನರ ಮನಸ್ಸೂ ಅವರ ದ್ರವ್ಯವೂ ತಿರುಗಿಹೋಯಿತು. ಈಗಿನ ನಡತೆಯೂ ಜನರ ರೀತಿಯೂ ಬೇರೆಯಾಯಿತು.

ಇದು ಹಾಗಿರಲಿ. ಎಂಥಾ ಮಡ್ಡಿಯಾದ ಶಿಷ್ಯನೇ ಆದರೂ ಅವನನ್ನು ರಾಮಶಾಸ್ತ್ರಿಗಳು ಕೇವಲ ದಯದಿಂದ ಕಾಣುತಾ ತಮ್ಮ ಮಕ್ಕಳಂತೆ ಶಿಷ್ಯರೆಲ್ಲರನ್ನೂ ಕಾಪಾಡುತಾ ಇದ್ದರು. ಸಾಧಾರಣವಾಗಿ ಗುರುಗಳಿಗೆ ಸುಟಿಯಾದ ಶಿಷ್ಯನಲ್ಲಿರತಕ್ಕ ಅಭಿಮಾನವು ಇತರ ವಿದ್ಯಾರ್ಥಿಗಳಲ್ಲಿ ಇರುವುದು ರೂಢವಾಗಿಲ್ಲ. ಹೀಗಾಗುವುದರಿಂದ ಪಟುವಾದವರಿಗೆ ಒಂದು ಬಗೆಯ ಪ್ರೋತ್ಸಾಹವುಂಟಾಗಿ ಅವರು ಘಟಕರಾಗುವುದೂ, ಗುರುವಿನ ಆದರ ಕಡಮೆಯಾಗಿರುವ ವಿದ್ಯಾರ್ಥಿಗೆ ಅಧೈರ್ಯ ಉಂಟಾಗಿ ಅವನ ಸಹಜವಾದ ಮಾಂದ್ಯ ಇನ್ನೂ ಹೆಚ್ಚಾಗಿ ಅವನು ಶುಂಠನೆನ್ನಿಸಿಕೊಳ್ಳುವುದೂ, ಗುರುಶಿಷ್ಯಧರ್ಮದಲ್ಲಿ ಅತಿಸಹಜವಾಗಿ ರೂಢಿಯಾಗಿದೆ. ಆದರೆ ರಾಮಶಾಸ್ತ್ರಿಗಳು ಎಲ್ಲಾ ಶಿಷ್ಯರನ್ನೂ ಏಕರೀತಿಯಾಗಿ ಕಾಣುತಾ ಪಾಠವನ್ನು ಎಲ್ಲರಿಗೂ ಒಂದು ಹೊತ್ತಾದರೂ ತಾವೇ ಹೇಳಿಕೊಡುತಾ ಇದ್ದ ಕಾರಣ, ಮೇಧಾಶಾಲಿಯಾದ ವಿದ್ಯಾರ್ಥಿ ದೊಡ್ಡ ಪಂಡಿತನಾಗಿಯೂ ಮಡ್ಡಿಯಾದ

ವಿದ್ಯಾರ್ಥಿ ವಿದ್ವಾಂಸನೆನ್ನಿಸಿಕೊಳ್ಳುತ್ತಲೂ ಇರುತಿದ್ದರು.

ಗುರುಗಳಲ್ಲಿ ಶಿಷ್ಯರೆಲ್ಲರಿಗೂ ಭಕ್ತಿ ಹೆಚ್ಚಲು ಇನ್ನೊ ಬಂದು ವಿಶೇಷ ಸಂಗತಿಯು ಇಲ್ಲಿ ಕಾಣಿಸುವುದಕ್ಕೆ ಅರ್ಹವಾದ್ದಾಗಿದೆ. ಅನೇಕ ಜನ ಪಂಡಿತರು ಬಾಲ್ಯ ಪಾಠಗಳನ್ನು ಸ್ವತಃ ಹೇಳುವ ವಾಡಿಕೇ ಇಟ್ಟಿರುವುದಿಲ್ಲ. ಯಾರಾದರೂ ಉದ್ಗ್ರಂಥವನ್ನು ಓದುವ ಒಬ್ಬ ಶಿಷ್ಯನ ಮೂಲಕ ಬಾಲ್ಯಪಾಠಗಳನ್ನು ಶಾಸ್ತ್ರಾರಂಭ ಮಾಡತಕ್ಕ ಕಾಲದಲ್ಲಿ ಹೇಳಿಸುವುದು ರೂಢವಾಗಿದೆ. ಇದರಿಂದ ದೊಡ್ಡ ಶಾಸ್ತ್ರಿಗಳಲ್ಲಿ ಬಂದು ಓದಿದ ಪ್ರಯೋಜನವು ಆರಂಭದಲ್ಲಿ ವಿದ್ಯಾರ್ಥಿಗಳಿಗೆ ಬಂದಂತೆ ಆಗುವುದಿಲ್ಲ. ಈ ಭಾಗ್ಯಕ್ಕೆ ಅಂಥಾ ಹಿರೀ ವಿದ್ಯಾರ್ಥಿಯ ಮನೆಗೇ ಹೋಗಿ ಇತರ ಚಿಕ್ಕಚಿಕ್ಕ ಶಿಷ್ಯರು ವ್ಯಾಸಂಗ ಮಾಡಿಕೊಂಡರೆ ಸಾಕಾಗಿರುತ್ತೆ. ಈ ಆಚರಣೆಯು ಸಾಧಾರಣವಾಗಿ ವಿದ್ಯಾರ್ಥಿಗಳಿಗೆ ಬಂದೊಂದು ಸಮಯದಲ್ಲಿ ಜಿಹಾಸೆಯನ್ನು ಉಂಟುಮಾಡುವುದು. ಕಲ್ಯಾಣದುರ್ಗದಲ್ಲಿ ಈ ಅನುಭವವು ರಾಮಶಾಸ್ತ್ರಿಗಳಿಗೆ ಸ್ವತಃ ಉಂಟಾಗಿತ್ತು. ಅಲ್ಲಿ ಇವರಿಗೆ ಹುಟ್ಟಿದ ಜಿಹಾಸೆಯು ತಿರುಪತಿ ಶ್ರೀನಿವಾಸಾಚಾರ್ಯರಲ್ಲಿ ಶಾಸ್ತ್ರಿಗಳು ಪಾಠವನ್ನು ಓದಲು ಅರ್ಧಮಟ್ಟಿಗೆ ಸಹಕಾರಿಯಾಗಿ ಇವರನ್ನು ಮೈಸೂರಿಗೆ ಕರೆದು ತಂದಿತು.

ತ್ರಿಯಂಬಕಶಾಸ್ತ್ರಿಗಳ ಪಾಂಡಿತ್ಯವು ಕಲ್ಯಾಣದುರ್ಗಕ್ಕೆ ರಾಮಶಾಸ್ತ್ರಿಗಳನ್ನು ಎಳೆದುಕೊಂಡು ಹೋದರೂ ಪಾಪಿ ಸಮುದ್ರವನ್ನು ಹೊಕ್ಕಾಗ್ಯೂ ಅಲ್ಲಿ ಕೂಡ ಮೊಳಕಾಲುದ್ದ ಕೆಸರು ಸಿಕ್ಕಿತು ಎಂಬ ಮಾತನ್ನು ರಾಮಶಾಸ್ತ್ರಿಗಳು ಜ್ಞಾಪಿಸಿಕೊಳ್ಳಲೇಬೇಕಾಗಿ ಬಂತು. ಇಂಥಾ ಲೋಪಕ್ಕೆ ತಾವು ಅವಕಾಶ ಕೊಡಬಾರದೆಂದು ರಾಮಶಾಸ್ತ್ರಿಗಳು ಪ್ರಾತಃಕಾಲ ತಮ್ಮ ಆಹ್ನಿಕವೆಲ್ಲಾ ತೀರಿದಮೇಲೆ ಉದ್ಗ್ರಂಥ ಓದುವ ವಿದ್ಯಾರ್ಥಿಗಳಿಗೆ ೯ ಗಂಟೆಯಿಂದ ೧೨ ಗಂಟೆಯವರೆಗೂ, ಅವರಲ್ಲಿಯೇ ಇನ್ನೂ ಕೆಲವರಿಗ ೪ ಗಂಟೆಯಿಂದ ೬ ಗಂಟೆಯುವರೆಗೂ, ಬಾಲ್ಯಪಾಠದ ವಿದ್ಯಾರ್ಥಿಗಳಿಗೆ ಸಾಯಂಕಾಲದಲ್ಲಿಯೂ, ಪಾಠವನ್ನು ಸ್ವತಃ ಹೇಳುತಾ ಇದ್ದರು. ವಿದ್ಯಾರ್ಥಿಗಳಿಗೆ ಚಿಂತನೆ ಮಾಡಿಸುವುದಕ್ಕೆ ಮಾತ್ರ ಸಾಗಗೆರೆ ನಾರಾಯಣಶಾಸ್ತ್ರಿಗಳು, ಕವಿ ವರದಾಚಾರ್ಯರು, ಇವರುಗಳನ್ನು ಗೊತ್ತುಮಾಡಿದ್ದರು. ಹೀಗೆ ತಮ್ಮಲ್ಲಿ ಬಂದ ಯಾವ ವಿದ್ಯಾರ್ಥಿಗೂ ಬಿಡದೆ ತಾವೇ ಪಾಠವನ್ನು ಹೇಳುತಾ ಇದ್ದದು ಶಿಷ್ಯರನ್ನು ಆಕರ್ಷಿಸುವುದಕ್ಕೆ ದೊಡ್ಡ ಕಾರಣವಾಯಿತು. ಪ್ರದೋಷದ ದಿವಸ ಹೊಸ ಪಾಠವನ್ನು ಹೇಳದೆ ಹಳೇ ಪಾಠದಲ್ಲಿಯೇ ಚಿಂತನೆಮಾಡಿಸಿ ವಾಕ್ಯಾರ್ಥವನ್ನು ಇಡಿಸುತಾ ಇದ್ದರು. ಹೀಗಾದ್ದರಿಂದ ಶಾಸ್ತ್ರ

ಗಳಿಗೆ ಲೇಶವೂ ವ್ಯವಧಾನವಿರಲಿಲ್ಲ. ಪಾಠಪ್ರವಚನಕ್ರಮ ಹೀಗೆಲ್ಲಾ ಇದ್ದಕಾರಣ ಗುರುಗಳ ಖ್ಯಾತಿಯು ದಿಕ್ಕುದಿಕ್ಕಿಗೂ ವ್ಯಾಪಿಸಿತು. ಶಿಷ್ಯರ ಸಂಖ್ಯೆ ಅಷ್ಟೂ ಅಷ್ಟು ಹೆಚ್ಚುತಾ ಬಂತು. ವಿದ್ಯಾರ್ಥಿಗಳಿಗೆ ದೇಹಕ್ಕೆ ಆಲಸ್ಯವಾದರೆ ಶಾಸ್ತ್ರಿಗಳು ತಮಗೆ ಆಲಸ್ಯವಾದಂತೆ ಪೇಚಾಡುತಾ ಅಂಥವರಿಗೆ ತಾವೇ ತಮ್ಮ ಕೈಯಿಂದ ಔಷಧವನ್ನೂ ಪಥ್ಯವನ್ನೂ ಕೊಡುತಾ ಇದ್ದರು. ಬರೀ ಪಾಂಡಿತ್ಯಕ್ಕೆ ಮಾತ್ರವೇ ಅಲ್ಲದೆ ಎಲ್ಲಾ ಸದ್ಗುಣಗಳಿಗೂ ನಿಧಿಯಾಗಿದ್ದ ಕಾರಣ, ಶಾಸ್ತ್ರಿಗಳಲ್ಲಿ ಶಿಷ್ಯರೆಲ್ಲರೂ ವಿಶೇಷವಾಗಿ ಭಕ್ತಿಯನ್ನು ಇರಿಸಿಕೊಂಡು ಇದ್ದರು.

ರಾಮಶಾಸ್ತ್ರಿಗಳ ಮನೆಯಿದ್ದ ಛತ್ರದಬೀದಿಯು ಒಳ್ಳೇ ಸ್ಥಿತಿಯಲ್ಲಿತ್ತು. ಅನೇಕ ದೊಡ್ಡದೊಡ್ಡ ಅಧಿಕಾರಿಗಳೂ ಅಹಲೇಕಾರರೂ ಆ ಬೀದಿಯಲ್ಲಿ ಮನೇ ಕಟ್ಟಿಕೊಂಡಿದ್ದರು. ರಾಮಶಾಸ್ತ್ರಿಗಳ ಶಿಷ್ಯರು ಆ ಬೀದಿಯಲ್ಲಿ ಒಂದೊಂದು ಮನೆಯ ಜಗಲೀಮೇಲೆಯೂ ಕೂತುಕೊಂಡು ಚಿಂತನೆಮಾಡುತಾ ಇದ್ದರು. ಈ ಕೂಗು ಬಹಳ ದೂರಕ್ಕೆ ಕೇಳಿಸುತಾ ಇತ್ತೆಂದು ಕಂಡಿದ್ದ ಅನುಭವಶಾಲಿಗಳು ಹೇಳುತಾರೆ. ಇದೂ ಅಲ್ಲದೆ ಪ್ರತಿ ವರುಷವೂ ಭಾದ್ರಪದ ಶುದ್ಧ ಚೌತಿ ದಿವಸ ಗಣೇಶನನ್ನು ಕೂರಿಸುತಿದ್ದರು. ಆ ದಿವಸ

ಮೊದಲುಗೊಂಡು ೨೧ ದಿವಸಗಳವರೆಗೆ ಯಾವ ಪಾಠವನ್ನೂ ವಿದ್ಯಾರ್ಥಿಗಳಿಗೆ ಹೇಳುತಾ ಇರಲಿಲ್ಲ. ಆ ಕಾಲದಲ್ಲಿ ಪ್ರತಿ ದಿವಸವೂ ರಾತ್ರೆ ಮಂಗಳಾರತಿಯಾಗುವುದಕ್ಕೆ ಮುಂಚೆ ತರ್ಕಶಾಸ್ತ್ರದಲ್ಲಿಯೂ ವೇದಾಂತಶಾಸ್ತ್ರದಲ್ಲಿಯೂ ವಾಕ್ಯಾರ್ಥ ಜರುಗುವಂತೆ ಏರ್ಪಾಡಮಾಡಿದ್ದರು. ಒಂದೇ ಭಾಗವನ್ನು ಓದುವ ವಿದ್ಯಾರ್ಥಿಗಳಲ್ಲಿ ಇಬ್ಬಿಬ್ಬರಾಗಿ ವಿಂಗಡಿಸಿ ವಾಕ್ಯಾರ್ಥ ಜರುಗುವಂತೆ ಮಾಡಿ, ಅವರಲ್ಲಿಯೇ ಮಾಧ್ಯಸ್ಥಕ್ಕೂ, ಒಬ್ಬರನ್ನುಕೂರಿಸಿ, ಕೊನೆಗೆ ತಾವು ಸಂಶಯಗಳನ್ನು ಪರಿಚ್ಛೇದ ಮಾಡುತಾ ಇದ್ದರು. ಆ ದಿವಸಗಳಲ್ಲಿ ವಿನಾಯಕನ ಮಂಗಳಾರತಿಗೆ ಅನೇಕಜನ ವೈದಿಕರನ್ನೂ ಅಹಲೇಕಾರರನ್ನೂ ಕರೆಯುತಾ ಇದ್ದರು. ಶಾಸ್ತ್ರಿಗಳ ಮನೆಗೆ ಹೋಗತಕ್ಕದ್ದೇ ದೊಡ್ಡ ಗೌರವವೆಂದು ಅನೇಕರು ಹೋಗುತ್ತಲೂ ಇದ್ದರು. ಆಗ ಬಂದ ಇತರ ದೊಡ್ಡ ಪಂಡಿತರ ಸಂಗಡ ಶಾಸ್ತ್ರಿಗಳು ವಾಕ್ಯಾರ್ಥಕ್ಕೆ ತಾವೂ ಕೂತುಕೊಳ್ಳುತಾ ಇದ್ದರು. ಹೀಗೆ ಸ್ವತಃ ಉಜ್ಜುಗಿಸಿದ ದಿವಸ ರಾತ್ರೆ ದೇವರಿಗೆ ಮಂಗಳಾರತಿಯಾಗುವುದು ೨—೩—೪ ಗಂಟೆ ಸಹಿತ ಆಗುತಾ ಇತ್ತು.

ಈ ಗಣೇಶನ ಮಂಗಳಾರತಿಸಭೆಗೆ ಶಾಸ್ತ್ರಿಗಳ ಗುರುಗಳಾದ ತಿರುಪತಿ ಶ್ರೀನಿವಾಸಾಚಾರ್ಯರೂ ಬರುತಾ ಇದ್ದರು.

ಪ್ರಿಯಶಿಷ್ಯರ ಪಾಂಡಿತ್ಯವನ್ನೂ ವಾಗ್ಧೋರಣೆಯನ್ನೂ ಪ್ರತಿಭೆಯನ್ನೂ ನೋಡಿ ಗುರುಗಳಾದ ಶ್ರೀನಿವಾಸಾಚಾರ್ಯರು ಮನಸ್ಸಿನಲ್ಲಿ ಹಿಗ್ಗುತಾ ಇದ್ದರು. ಗಣೇಶನ ಮಂಗಳಾರತಿ ಕಾಲದಲ್ಲಿ ಒಂದಾನೊಂದು ರಾತ್ರಿ ವಿದ್ಯಾರ್ಥಿಗಳ ವಾಕ್ಯಾರ್ಥಸಮನ್ವಯಗಳನ್ನು ಕಂಡು ಪಾಂಡಿತ್ಯದ ಕೆಚ್ಚು ಇರಗೊಳಿಸಲಿಲ್ಲ. ತಿರುಪತಿ ಶ್ರೀನಿವಾಸಾಚಾರ್ಯರಿಗೂ ಈ ಸಂಭ್ರಮದಲ್ಲಿ ಭಾಗಿಗಳಾಗಲು ಆಶೆಹುಟ್ಟಿತು. ಇವರ ಸಂಗಡ ಸೆಣಗಾಟಕ್ಕೆ ಕೂತುಕೊಳ್ಳಲು ರಾಮಶಾಸ್ತ್ರಿಗಳು ಹೊರತು ಮತ್ತೆ ಯಾರೂ ಸಮರ್ಥರಾಗಿರಲಿಲ್ಲ. ಹೀಗೆ ಗುರುಶಿಷ್ಯರಿಬ್ಬರಿಗೂ ಚರ್ಚೆಗೆ ಆರಂಭವಾಯಿತು. ಕೋಟಿ ಪ್ರತಿಕೋಟಿಗಳು ಒಬ್ಬೊರಮೇಲೂ ಏರುತಾ ಬಂದವು. ಸಾಧಾರಣ ವಿದ್ಯಾರ್ಥಿಗಳ ಹಾರಾಟವೆಲ್ಲಾ ನಿಂತುಹೋಯಿತು. ದ್ರೋಣಾರ್ಜುನರ ಕಾಳಗವೋ ಸರಸ್ವತಿ ದಕ್ಷಿಣಾಮೂರ್ತಿಗಳ ಸಂವಾದವೋ ಗೊತ್ತಾಗದೇ ಹೋಯಿತು. ಈ ಪ್ರಕಾರ ನಡೆಯುತಾ ಇರುವ ವಾದವೈಖರಿಯನ್ನು ಕೇಳಿದ ಕೂಡಲೆ ಮೈಸೂರಲ್ಲಿದ್ದ ಮುಖಂಡರೆಲ್ಲಾ ರಾಮಶಾಸ್ತ್ರಿಗಳ ಮನೆಗೆ ತಾವಾಗಿಯೇ ಬಂದುಬಿಟ್ಟರು. ಬೆಳಗಿನ ಜಾವದ ಸಮಯವಾಯಿತು. ರಾಮಶಾಸ್ತ್ರಿಗಳು ಗುರುಗಳ ಮೇಲೆ ವಿಶೇಷವಾಗಿ ಕೋಟಿಯನ್ನು ಏರಿಸಿದರು. ಆಗ ಎಲ್ಲಾ

ಕಾಣುವಹಾಗೆ ಶ್ರೀನಿವಾಸಾಚಾರ್ಯರು "ನಮ್ಮ ರಾಮುಡು "ಶಾಸ್ತ್ರಿ! ದಕ್ಷಿಣಾಮೂರ್ತಿಯ ಅವತಾರ! ನಿನಗೆ ಯಾರು "ಎದುರುತ್ತರ ಕೊಟ್ಟಾರಪ್ಪಾ!" ಎಂದು ಆನಂದದಿಂದ ಕಣ್ಣಿನಲ್ಲಿ ನೀರನ್ನು ಬಟ್ಟಾಡಿಸುತಾ ಶಿಷ್ಯನನ್ನು ಬಾಚಿ ತಬ್ಬಿಕೊಂಡರು. ಆ ಮಹಾ ಸಭೆಯೆಲ್ಲಾ ಜಯಜಯ! ಎಂದುಹೋಯಿತು.

ದ್ರೋಣಾಚಾರ್ಯರು ಹೆಚ್ಚಾದ ಗುರುಭಕ್ತಿಯನ್ನು ಇರಿಸಿಕೊಂಡಿದ್ದ ಏಕಲವ್ಯನ ಬೆರಳನ್ನು ಸಮಂಜಸವಾದ ಕಾರಣವಿಲ್ಲದೆ ಕತ್ತರಿಸಿಸಿದರು; ಅನೇಕವೇಳೆ ಪ್ರಿಯ ಶಿಷ್ಯನಾದ ಅರ್ಜುನನ ಏಟನ್ನು ತಡೆಯಲಾರದೆ ವೀರಾವೇಶವನ್ನು ತಾಳಿ, ಅರ್ಜುನನು ಸುದಾರಿಸಿಕೊಳ್ಳಲು ಅಸಾಧ್ಯವಾಗುವಹಾಗೆ ಬಾಣಪ್ರಯೋಗವನ್ನು ಮಾಡಿದರು. ಸಾಧಾರಣ ಬಾಣಗಳ ಪೆಟ್ಟಿಗಿಂತಲೂ ಬುದ್ಧಿ ಎಂಬ ಬಾಣದ ಪೆಟ್ಟು ಚುರಕಾದ್ದು. ಎಂಥವರೂ ಸಹಿಸುವುದಕ್ಕೆ ಕಷ್ಟವಾಗುವಂಥಾದ್ದು. ಇದನ್ನು ಸಹಿಸಿಕೊಂಡು ಶಿಷ್ಯನನ್ನು ಪ್ರತಿಯಾಗಿ ಬಾರಿಸದೆ, ಪ್ರೀತಿರಸವನ್ನು ಕಣ್ಣಿನಿಂದ ಸುರಿಸುತಾರೋ ಎನ್ನುವಹಾಗೆ, ಆನಂದಬಾಷ್ಪದೊಡನೆ ಶಿಷ್ಯನನ್ನು ತಬ್ಬಿಕೊಂಡ ಶ್ರೀನಿವಾಸಾಚಾರ್ಯರ ಮಹಿಮೆಯು ದ್ರೋಣಾಚಾರ್ಯರ ಮಹಿಮೆಗಿಂತಲೂ ಗುಂಜೀಭಾರ ಹೆಚ್ಚಾಗಿ

ತೂಗುವಂತೆ ಕಾಣುತ್ತೆ. ಇಂಥಾ ಗುರುವಿನಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ ವಿದ್ಯಾರ್ಥಿಯ ಯೋಗ್ಯತೆ ಅಪರಿಮಿತವಾಗಿತ್ತೆಂದು ಹೇಳಬೇಕಾದ್ದೇ ಇಲ್ಲ. ಇಂಥಾ ಗುರುಶಿಷ್ಯರ ಪ್ರಭಾವವು ಅವರವರಿಗೇ ಗೊತ್ತಿರಬೇಕಲ್ಲದೆ ಇನ್ನು ಯಾರು ತಾನೇ ಹೇಳಲು ಸಾಧ್ಯವಾದೀತು?

ಶಾಸ್ತ್ರಿಗಳಿಗೆ ಮುಖ್ಯಶಿಷ್ಯರಾಗಿ ಉತ್ತರೋತ್ತರ ಮಹಾ ಪಂಡಿತರೆನಿಸಿಕೊಂಡಂಥಾ ಕೆಲವರ ಹೆಸರನ್ನು ಇಲ್ಲಿ ಕಾಣಿಸತಕ್ಕದ್ದು ಅಗತ್ಯವೆಂದು ತೋರಿದೆ. ಇವರಲ್ಲಿ

೧ ಈಚೆಗೆ ಪರಕಾಲಸ್ವಾಮಿಗಳಾಗಿದ್ದ ರೀಮ ರಂಗಾಚಾರ್ಯರು,

೨ ಆನಂದಾಳ್ವಾರು,

೩ ಸಿಂಗಳಾಚಾರ್ಯರು,

೪ ಸೋಸಲೇ ಮಠದ ರಂಗಶ್ರೀನಿವಾಸಾಚಾರ್ಯರು,

೫ ರಾಮಗಿರಿ ಶಾಮಾಚಾರ್ಯರು,

೬ ಬಾನಂಬಳ್ಳಿ ವೆಂಕಟರಮಣಾಚಾರ್ಯರು,

೭ ಗದ್ದವಾಲದ ಶೇಷಶಾಸ್ತ್ರಿಗಳು,

೮ ಅನಂತಾಚಾರ್ಯರು,

೯ ಕವಿ ವರದಾಚಾರ್ಯರು,

೧೦ ಕುಂಭಕೋಣೆಯಲ್ಲಿದ್ದ ಕುರಚ್ಚಿ ರಂಗಾಚಾರ್ಯರು,

೧೧ ಕಾಂಚೀಪುರದ ತಾಲ್ಲೋಕು ಶೋಭತ್ತೂರು ವಿಜಯ ರಾಘವಾಚಾರ್ಯರು,

೧೨ ಕೊಚ್ಚಿಯಲ್ಲಿದ್ದ ರಂಗಪ್ಪಾಚಾರ್ಯರು,

೧೩ ದೊಡ್ಡಬಳ್ಳಾಪುರದ ವಿದ್ಯಾಸಿಧಿ ವಾಸುದೇವಶಾಸ್ತ್ರಿಗಳು,

೧೪ ಪಂಡಿತ ಭಾಷ್ಯಾಚಾರ್ಯರು,

೧೫ ಕುಂಭಕೋಣೆಯಲ್ಲಿರುವ ಕುಪನ್ನೈಯ್ಯಂಗಾರ್‍ರು,

೧೬ ಸಾಗುಗೆರೆ ನಾರಾಯಣಶಾಸ್ತ್ರಿಗಳು,

೧೭ ರಾಮಶಾಸ್ತ್ರಿಗಳ ಹಿರೀ ಮಕ್ಕಳು ಲಕ್ಷ್ಮೀನರಸಿಂಹ ಶಾಸ್ತ್ರಿಗಳು,

೧೮ ವೇದಾಂತ ರಾಮಪ್ಪನವರು,

೧೯ ಕುಪ್ಪಶಾಸ್ತ್ರಿಗಳು,

೨೦ ಕುಟ್ಟ ನರಸಿಂಹಶಾಸ್ತ್ರಿಗಳು,

೨೧ ಜೋಯಿಸ ಸಿಂಗಳಾಚಾರ್ಯರು,

೨೨ ತೋಗಿರೆ ಶ್ರೀಕಂಠಶಾಸ್ತ್ರಿಗಳು,

೨೩ ಕೊಯಮುತ್ತೂರು ಭೀಮಾಚಾರ್ಯರು,

೨೪ ನಿಡಗಲ್ಲು ಕೃಷ್ಣಶಾಸ್ತ್ರಿಗಳು,

೨೫ ತಿರಮುಕುಡಿ ಅಪ್ಪಣ್ಣಾಚಾರ್ಯರು,

೨೬ ಮುತ್ತೂರು ರಾಮಾಶಾಸ್ತ್ರಿಗಳು,

೨೭ ಸುಬ್ರಹ್ಮಣ್ಯಶಾಸ್ತ್ರಿಗಳು,

೨೮ ಧಾರವಾಡದ ಶ್ರೀನಿವಾಸಾಚಾರ್ಯರು,

೨೯ ಕಣಗಾಲ ರಾಮಶಾಸ್ತ್ರಿಗಳು,

೩೦ ಸೊಂಡೇಕೊಪ್ಪದ ಗಂಗಾಧರಶಾಸ್ತ್ರಿಗಳು,

ಇವರೇ ಮೊದಲಾಗಿ ಅನೇಕ ಜನ ಶಿಷ್ಯರು ಪ್ರಸಿದ್ಧರಾಗಿ ಇದ್ದರು.

ರಾಮಶಾಸ್ತ್ರಿಗಳು ಎಲ್ಲಿಗೆ ಸಂಚಾರಕ್ಕಾಗಲಿ ವಾಕ್ಯಾರ್ಥಕ್ಕಾಗಲಿ ಹೋದಾಗ್ಯೂ, ಶಿಷ್ಯರು ಯಾರನ್ನೂ ಬಿಟ್ಟುಹೋಗುತಾ ಇರಲಿಲ್ಲ. ಹೋದ ಸ್ಥಳದಲ್ಲಿ ಶಾಸ್ತ್ರಿಗಳು ಯಾರಲ್ಲೂ ಭೋಜನಕ್ಕೆ ಹೋಗುತಾ ಇರಲಿಲ್ಲ. ಶಾಸ್ತ್ರಿಗಳಿಗೋಸ್ಕರ ದೊಡ್ಡಬಳ್ಳಾಪುರದ ವಾಸುದೇವಶಾಸ್ತ್ರಿ, ಸಾಗುಗೆರೆ ನಾರಾಯಣಶಾಸ್ತ್ರಿ, ಇವರಿಬ್ಬರಲ್ಲಿ ಒಬ್ಬರು ಅಡಿಗೇ ಮಾಡುತಾ ಇದ್ದರು.



## ೬ನೇ ಅಧ್ಯಾಯ

### ಮೈಸೂರ ವಾಸ—ಶ್ರೀಯಪ್ಪಾಚಾರ್ಯರ ಪ್ರಸಂಗ.



ರಾಮಶಾಸ್ತ್ರಿಗಳು ಪ್ರತಿದಿನವೂ ಒಂದು ಸಾರಿ ಅರಮನೆಗೆ ಹೋಗಿ ಬರುವ ಪದ್ಧತಿಯನ್ನು ಇರಿಸಿದ್ದರು. ಹಗಲು ದೊರೆಗಳ ಶಿವಪೂಜಾಕಾಲಕ್ಕೆ ಸರಿಯಾಗಿ ಹೋಗಿ

ಸ್ವಲ್ಪಹೊತ್ತು ಆತ್ಮವಿಲಾಸ ಅಥವ ನಾಮತೀರ್ಥದ ತೊಟ್ಟಿಯಲ್ಲಿದ್ದು ಶಿವಪೂಜೆ ಮುಗಿದಕೂಡಲೆ ಕೆಲವು ಸದ್ವಿಷಯವಾದ ಮಾತುಗಳನ್ನಾಡಿ ಆಶೀರ್ವಾದಮಾಡಿ ಬರುತಾ ಇದ್ದರು. ಹೀಗೆ ಅನೇಕ ವಿದ್ವಾಂಸರು ಮಾಡುತಾ ಇದ್ದರು. ವಿದ್ವಾಂಸರ ಗೋಷ್ಟಿಯು ಹೆಚ್ಚಿನ ರುಚಿಯುಳ್ಳದ್ದಾಗಿ ಕಂಡುಬಂದ ದಿವಸ ದೊರೆಯು ಇವರೊಡನೆ ಅಂಬಾವಿಲಾಸಕ್ಕೆ ಹೋಗಿ ಕೂತುಕೊಂಡು ಆನಂದವಾಗಿ ಕಾಲಕ್ಷೇಪಮಾಡುತಾ ಇದ್ದರು.

ಮೈಸೂರ ಅರಮನೆಯನ್ನು ಅರಿಯದವರು ಅಂಬಾವಿಲಾಸವೆಂದಕೂಡಲೆ ಕಕ್ಕುಬಿಕ್ಕಾಗಬಹುದು. ಅಂಬಾವಿಲಾಸವೆನ್ನುವುದು ಹಳೇ ಅರಮನೆಯಲ್ಲಿ ಒಂದು ತೊಟ್ಟಿ. ಇಲ್ಲಿಯೇ ಕೃಷ್ಣರಾಜ ಒಡೆಯರವರು ಯಾವಾಗಲೂ ಇರುತಾ ಒಳ ಆಡಳತಗಳನ್ನು ನಡಿಸುತಾ ಇದ್ದರು. ಹೀಗೆಯೇ ಮನೋವಿಲಾಸ, ಆತ್ಮವಿಲಾಸ, ರಾಜೇಂದ್ರವಿಲಾಸ, ಎಂಬ ತೊಟ್ಟಿಗಳು ಇದ್ದವು. ಹೀಗೆಯೇ ರಾಜಪತ್ನಿಪರಿವಾರಗಳ ಅಂತಃಪುರದ ನಿವಾಸಕ್ಕಾಗಿ ಲಕ್ಷ್ಮೀವಿಲಾಸ, ರಮಾವಿಲಾಸ, ಸೀತಾವಿಲಾಸ, ಕೃಷ್ಣವಿಲಾಸ, ಚಂದ್ರವಿಲಾಸ, ಮದನವಿಲಾಸ, ಕಮಾನತೊಟ್ಟಿ, ಜಂತದತೊಟ್ಟಿ, ಬಣ್ಣದ ತೊಟ್ಟಿ, ಸಮ್ಮುಖದ ತೊಟ್ಟಿ, ಕರೀಕಲ್ಲತೊಟ್ಟಿ,

ಕುದುರೇತೋಟ್ಟಿ, ನಾಮತೀರ್ಥದತೊಟ್ಟಿ, ಎಂದು ಮನೋಹರವಾದ ಹೆಸರುಗಳನ್ನುಳ್ಳ ತೊಟ್ಟಿಗಳಿದ್ದವು. ಈಚೆಗೆ ಅರಮನೆಗೆ ಅಗ್ನಿಪ್ರವೇಶವಾದಾಗ ಈ ತೊಟ್ಟಿಗಳೆಲ್ಲಾ ಯಜ್ಞೇಶ್ವರನ ಹೊಟ್ಟೆಯಲ್ಲಿ ಅಡಗಿಕೊಂಡವು.

ಅರಮನೆಯ ವಿದ್ವಾಂಸರು ಕೆಲವರು ಸಮ್ಮುಖದ ಆಸ್ಥಾನಪಂಡಿತರೆಂದು ಹೆಸರಿಟ್ಟುಕೊಂಡು, ಪಾಂಡಿತ್ಯದ ಉಡುಪನ್ನು ವಹಿಸಿ ತಿಂಗಳಿಗೆ ಒಂದು ಸಾರಿ ಸಂಬಳವನ್ನು ತರುವುದಕ್ಕೆ ಮಾತ್ರ ಅರಮನೆಗೆ ಹೋಗಿಬರುವ ಪದ್ಧತಿಯನ್ನು ಇಟ್ಟದಾರೆ. ವಿಶೇಷ ದಿವಸಗಳಲ್ಲಿ ಪೆಚ್ಚಿನ ವರಮಾನ ಬರಬಹುದಾಗಿದ್ದರೆ ಅಂಥಾ ಕಾಲಗಳಲ್ಲಿಯೂ ಈ ಪಂಡಿತರುಗಳು ಅರಮನೆಗೆ ಹೋಗಿ ಬರುವುದುಂಟು. ಆ ಸಮಯದಲ್ಲಿ ಹೋಗದೆ ಉಪೇಕ್ಷೆ ಮಾಡುವುದಕ್ಕೆ ಹೇಗಾದೀತು? ಇಂಥವರ ಪ್ರಸ್ತಾಪವನ್ನು ನಾನು ಇಲ್ಲಿ ಎತ್ತಿ ಹೇಳುವುದಿಲ್ಲ. ಇವರಲ್ಲಿ ಗಂಭೀರವಾಗಿ ತೆರಳತಕ್ಕವರು ಕೆಲವರು ಮಾತ್ರ ಇದಾರೆ. ಇನ್ನೂ ಕೆಲವರು ಅಂಥಾ ವಿಶೇಷದಿವಸಗಳಲ್ಲಿ ಶಾಲುಗಳನ್ನು ಹೊದ್ದು ತಂತಮ್ಮ ಮತಾನುಸಾರವಾದ ಲಲಾಟಚಿಹ್ನೆಗಳನ್ನು ಬಲವಾಗಿ ಇಟ್ಟು, ಮನೆಯಿಂದ ಹೊರಟು ಬೀದಿಯಲ್ಲಿ ನಿಂತು ತಮ್ಮ ಮನೇ ಜನರನ್ನು ಕೂಗಿ, "ಎಲೆ, ಯಾರಾದರೂ ನನ್ನನ್ನು ಕೇಳ

ಕೊಂಡುಬಂದರೆ ನಾನು ಅರಮನೆಗೆ ಹೋಗಿದಾರೆಂದು ಹೇಳು, ಎಂಬದಾಗಿ ಬೀದಿಯಲ್ಲಿ ಎಲ್ಲರಿಗೂ ಕೇಳುವಂತೆ ಕೂಗಿ ಹೇಳುತಾ, ಮುಂದಕ್ಕೆ ನಡೆದು, ಯಾರಾದರೂ ಲೌಕಿಕರು ಸಿಕ್ಕಿದರೆ ಅಲ್ಲಲ್ಲಿ ಕರ್ಣತಾಡನವಾಗಿದ್ದ ಇಂಗ್ಲಿಷ್ ಶಬ್ದಗಳನ್ನು ನೆಟ್ಟಗೋ ಸೊಟ್ಟಗೋ ಆಡುತಾ, ಮತ್ತೆ ಸಾಧಾರಣವಾದ ಪರಿಚಿತರನ್ನು ದಾರಿಯಲ್ಲಿ ಕಂಡಾಗ್ಗೂ ಅವರ ಸಂಗಡ ಏನೋ ನೆಪವನ್ನು ತೆಗೆದುಕೊಂಡು ಮಾತನಾಡುತಾ—ನಿನ್ನೆ ಸನ್ನಿಧಾನದಿಂದ ಕಟ್ಟಿಗೆಯವನು ಹರಿಕಾರ ಬಂದಿದ್ದರು, ಈ ದಿವಸ ಕುಹಯೋಗಶಾಂತಿ, ನಾವುಗಳು ಹೋಗದೆ ಇದ್ದರೆ ಪುಕಾರಾಗುತ್ತೆ, ಎಂದು ಹೇಳುತಾ ಹೇಳುತಾ, ಇತರರು ತಮ್ಮ ಉಡುಪಿನ ಸೆರಗನ್ನೂ ಅಂಚನ್ನೂ ನೋಡುತಾರೋ ಇಲ್ಲವೋ ಎಂದು ಅದನ್ನು ಆಗಾಗ್ಗೆ ಸರಿಮಾಡಿಕೊಂಡು ಸುತ್ತ ಹೋಗಿಬರುವ ಜನರ ಮುಖವನ್ನು ನೋಡುತಾ, ಅರಮನೆಗೆ ಹೋಗುವ ಭ್ರಾಂತಿಯೋಗವುಳ್ಳ ವರಂಪೆರಿಶಾಸ್ತ್ರಿಗಳ ಚರಿತ್ರೆಯನ್ನು ಬರೆಯಲು ಇದು ಸ್ಥಳವಲ್ಲ.

ಇಂಥಾ ಅಭಿಪ್ರಾಯಯಾವುದೂ ರಾಮಶಾಸ್ತ್ರಿಗಳಿಗೆ ಇರಲಿಲ್ಲ. ರಾಜಸ್ವತ್ತು ಹೇಗಾದಾಗ್ಗೂ ದೋಷಯುಕ್ತವಾದ್ದೆಂದು ಬಲ್ಲರು. ಆದರೂ ರಾಜನ ಅವಲಂಬನವಿಲ್ಲದ

ಪಾಂಡಿತ್ಯ ಶೋಭಿಸುವುದೂ ಇಲ್ಲ ವೃದ್ಧಿಗೂ ಬರುವುದಿಲ್ಲ. ಆದಕಾರಣ ರಾಜನಿಂದ ದತ್ತವಾದ ವೇತನವನ್ನು ಅಂಗೀಕರಿಸಬೇಕಾಗುತ್ತೆ. ಆದರೆ ಶಾಸ್ತ್ರವ್ಯಾಸಂಗಮಾಡಿ ಪಂಡಿತರನ್ನು ಹೆಚ್ಚಿಸುವುದೂ, ಅರಸನ ಶ್ರೇಯಃಪ್ರಾರ್ಥನೆಯನ್ನು ಮಾಡಿಕೊಂಡು ಆಶೀರ್ವಾದವನ್ನು ಮಾಡಿಕೊಂಡಿರುವುದೂ ವೈದಿಕರಿಗೆ ಮುಖ್ಯವಾದ ಕೆಲಸವಾದ್ದರಿಂದ, ನಿತ್ಯವೂ ರಾಜನನ್ನು ಕಂಡು ಶ್ರೇಯಃಪ್ರಾರ್ಥನೆಮಾಡಿದರೆ ಅರಮನೆಯಿಂದ ಬರುವ ವೇತನಕ್ಕೆ ಕೂಡಿದಮಟ್ಟಿಗೂ ಸ್ವಲ್ಪಕೆಲಸವನ್ನು ಮಾಡಿದಂತಾಯಿತೆಂದು ಶಾಸ್ತ್ರಿಗಳು ತಿಳಿದಿದ್ದರು.

ಮಹಾಪಂಡಿತರಾದ ತ್ರಿಯಂಬಕಶಾಸ್ತ್ರಿಗಳ ವಿಷಯವನ್ನು ಮೇಲೆ ಕಾಣಿಸಿದೆಯಷ್ಟೆ. ಇವರು ಅದ್ವೈತಮತವನ್ನು ಪ್ರಚಾರಮಾಡಿ ಅನೇಕ ಗ್ರಂಥಗಳನ್ನು ಬರೆದಿದಾರೆ. ತ್ರಿಯಂಬಕಶಾಸ್ತ್ರಿಗಳ ಸಿದ್ಧಾಂತವನ್ನು ಅನೇಕ ಮತಾಂತರದವರು ಖಂಡಿಸಲು ಯತ್ನಮಾಡಿದರು. ತಿರುಪತಿ ಶ್ರೀನಿವಾಸಾಚಾರ್ಯರ ಸಹಪಾಠಿಯಾದ ಹುಲಗಿ ಶ್ರೀಯಪ್ಪಾಚಾರ್ಯರು ಎಂಬುವರು ಹೆಸರಗೊಂಡು ತ್ರಿಯಂಬಕಶಾಸ್ತ್ರಿಗಳ ಗ್ರಂಥವನ್ನು ಖಂಡಿಸುವುದಾಗಿ ಹೇಳಿಕೊಳ್ಳುತಾ ದೇಶಾಂತರದಿಂದ ಮೈಸೂರಸೀಮೆಗೆ ಬಂದು, ಕೃಷ್ಣರಾಜ ಒಡೆಯುವರ ಭೇಟಿಯನ್ನು ಮಾಡಿಕೊಂಡರು.

ಈ ಮೈಸೂರ ಸಂಸ್ಥಾನದ ಪಂಡಿತರ ಸ್ಥಿತಿಯನ್ನು ವಿಚಾರಿಸಿಕೊಳ್ಳಬೇಕಾದ್ದು ಪ್ರಸಂಗಕ್ಕಾಗಿ ಬಂದ ಶ್ರೀಯಪ್ಪಾಚಾರ್ಯರಿಗೆ ಅಗತ್ಯವಾಗಿತ್ತು. ರಾಮಶಾಸ್ತ್ರಿಗಳ ಪಾಂಡಿತ್ಯದ ಆಧಿಕ್ಯವೂ ಅವರ ಧೈರ್ಯವೂ ಹೊಸದಾಗಿ ಮೈಸೂರಿಗೆ ಬಂದ ಪಂಡಿತರನ್ನು ಹೆದರಿಸತಕ್ಕದ್ದಾಗಿತ್ತು. ಈ ಸಂದರ್ಭಗಳೆಲ್ಲವನ್ನೂ ಶ್ರೀಯಪ್ಪಾಚಾರ್ಯರು ತಿಳಿದುಕೊಂಡು, ತಮ್ಮ ಸಹಪಾಠಿಯಾದ ತಿರುಪತಿ ಶ್ರೀನಿವಾಸಾಚಾರ್ಯರನ್ನು ಕುರಿತು—ಆಚಾರ್ಯರೆ, ನಾವು ಶಾಸ್ತ್ರಾರ್ಥಕ್ಕೆ ಕೂತುಕೊಂಡಾಗ ಸಮಾಧಾನ ಹೇಳುವುದರಲ್ಲಿ ದುಡುಕಿನಿಂದ ನಮ್ಮ ಗೌರವಕ್ಕೆ ಹಾನಿಯನ್ನು ಮಾಡದಂತೆ ತಮ್ಮ ಶಿಷ್ಯನಾದ ರಾಮಶಾಸ್ತ್ರಿಗೆ ಮೊದಲೇ ತಿಳಿಸಿರಬೇಕು, ಎಂದು ಹೇಳಿದರು. ಆಗ ತಿರುಪತಿ ಶ್ರೀನಿವಾಸಾಚಾರ್ಯರು—ಆಚಾರ್ಯರೆ, ರಾಮಶಾಸ್ತ್ರಿಯು ನಮ್ಮ ಶಿಷ್ಯನೇನೋ ನಿಜ, ಆದರೆ ಅವನಲ್ಲಿ ದುಡುಕು ಹೆಚ್ಚಾಗಿದೆ, ನಾನು ಹೇಳಿದಹಾಗೆ ಆತನು ಈ ವಿಚಾರದಲ್ಲಿ ಕೇಳುವುದಿಲ್ಲ, ಆಗೋಷ್ಠಿಗೆ ನಾನು ಬರುವುದಿಲ್ಲ, ಎಂದು ಶ್ರೀಯಪ್ಪಾಚಾರ್ಯರಿಗೆ ಹೇಳಿದರು, ತರುವಾಯ ಶ್ರೀನಿವಾಸಾಚಾರ್ಯರು ರಾಮಶಾಸ್ತ್ರಿಗಳನ್ನು ಕಂಡು—ರಾಮುಡು, ಶ್ರೀಯಪ್ಪಾಚಾರ್ಯನನ್ನು ನೋಡಿದ್ದೆ, ನಾಳೆ ನಡೆಯಬೇಕೆಂದು ಗೊತ್ತಾಗಿರುವ ವಾದದಲ್ಲಿ ತನ್ನಮೇಲೆ

ಕೋಟ ಏರಿಸಿ ತನಗೆ ಅಪಮಾನ ಮಾಡದಹಾಗೆ ನಿನಗೆ ಹೇಳಬೇಕೆಂದು ನನ್ನನ್ನು ಕೇಳಿಕೊಂಡನು. ಇದು ನನಗೆ ಸರಿಬೀಳಲಿಲ್ಲ. ಯೋಗ್ಯತೆ ಇದ್ದರೆ ಇದಿರಾಳನ್ನು ತಾನು ಜೈಸಿ ಹೆಸರನ್ನು ಪಡೆಯಬೇಕೇ ಹೊರತು, ಇಂಥಾ ದಮ್ಮ ಯ್ಯಗುಡ್ಡೆಹಾಕಿ ಗೌರವವನ್ನು ಸಂಪಾದಿಸಿದರೆ ಅದು ನಿಲ್ಲ ಲಾರದು. ನೀನು ಶ್ರೀಯಪ್ಪನನ್ನು ಬಿಡಬೇಡ, ನಿನ್ನ ಕೈ ಯನ್ನು ತೋರಿಸಿಯೇ ಬಿಡು, ಎಂದು ಹೇಳಿದರು. ಆದರೆ ರಾಮಶಾಸ್ತ್ರಿಗಳು ತಮ್ಮ ಸಹಪಾಠಿಯಾದ ತಿರುಪತಿ ಶ್ರೀನಿ ವಾಸಾಚಾರ್ಯರ ಶಿಷ್ಯರೆಂಬ ಒಂದು ಮಾತನ್ನು ಮುಂದು ಮಾಡಿಕೊಂಡು, ತಮಗೂ ಶಿಷ್ಯಭಾವದಲ್ಲಿಯೇ ಇರಬೇ ಕಾದ ವಿದ್ಯಾರ್ಥಿಯ ಸಂಗಡ ಪ್ರತ್ಯಕ್ಷವಾಗಿ ತಾವು ವಾಕ್ಯಾ ರ್ಥಕ್ಕೆ ನಿಲ್ಲಲು ತಮಗೆ ಇಷ್ಟವಿಲ್ಲವೆಂದು ಶ್ರೀಯಪ್ಪಾಚಾ ರ್ಯರು ಹೇಳಿದರು. ಇದು ಶುಭಕೃತು ಸಂವತ್ಸರದಲ್ಲಿ ನಡೆ ಯಿತು. ರಾಮಶಾಸ್ತ್ರಿಗಳಿಗೆ ಆಗ ೩೬ ವರುಷ ವಯಸ್ಸಾ ಗಿತ್ತು. ಇವರ ಪಾಂಡಿತ್ಯದ ಕೊಬ್ಬು ಶ್ರೀಯಪ್ಪಾಚಾರ್ಯರ ಹಿರ್ಮೆಯನ್ನು ಲಕ್ಷ್ಯಮಾಡತಕ್ಕದ್ದಾಗಿರಲಿಲ್ಲ. ಈತನೊಡನೆ ಪ್ರಸಂಗಮಾಡಲು ರಾಮಶಾಸ್ತ್ರಿಗಳು ಸಿದ್ಧರಾದರು. ಕೊನೆಗೆ ಶ್ರೀನಿವಾಸ ಬ್ರಹ್ಮತಂತ್ರ ಪರಕಾಲಸ್ವಾಮಿಗಳ ಮಾಧ್ಯಸ್ಥದಲ್ಲಿ ಶ್ರೀಯಪ್ಪಾಚಾರ್ಯರಿಗೂ ರಾಮಶಾಸ್ತ್ರಿಗಳಿಗೂ ಪತ್ರಿಕಾಪ್ರಸಂಗ

ವಾಗಬಹುದೆಂದು ಗೊತ್ತಾಯಿತು. ಆ ಸಮಯದಲ್ಲಿ ಪರ ಕಾಲಸ್ವಾಮಿಗಳವರು ಮೇಲುಕೋಟೆಗೆ ಹೋಗಬೇಕಾಗಿ ಬಂತು. ಶ್ರೀಯಪ್ಪಾಚಾರ್ಯರು ತ್ರಿಯಂಬಕಶಾಸ್ತ್ರಿಗಳ ಸಿದ್ಧಾಂ ತವನ್ನು ಖಂಡಿಸಿ ಕೆಲವು ಪತ್ರಗಳನ್ನು ಬರೆದು ಪರಕಾಲ ಸ್ವಾಮಿಗಳಲ್ಲಿಗೆ ಕಳುಹಿಸಿದರು. ಆ ಯತಿಶ್ರೇಷ್ಠರು ಹಯ ಗ್ರೀವ ಪೀಠವನ್ನು ಅಲಂಕರಿಸುತಾ ಸ್ವಯಂ ಮಹಾಪಂಡಿತ ರಾಗಿ ರಾಮಶಾಸ್ತ್ರಿಗಳ ಪ್ರತಿಭೆಯಿಂದುಂಟಾಗಬಹುದಾದ ವಿಜಯದಲ್ಲಿ ಅಧಿಕವಾದ ಧೈರ್ಯವನ್ನು ಇಟ್ಟುಕೊಂಡಿದ್ದ ಕಾರಣ, ಶ್ರೀಯಪ್ಪಾಚಾರ್ಯರು ತಮ್ಮಲ್ಲಿಗೆ ಬರೆಯಿಸಿ ಕ ಳುಹಿಸಿದ ಪೂರ್ವಪಕ್ಷದ ಪತ್ರಿಕೆಗಳನ್ನು ಶಾಸ್ತ್ರಿಗ ಳಿಗೆ ಕಳುಹಿಸಿದರು. ಆ ಮಠದ ಶಿಷ್ಯನೊಬ್ಬನು ಅದ ನ್ನು ರಾಮಶಾಸ್ತ್ರಿಗಳ ಮನೆಗೆ ತಂದನು. ಆಗ ಶಾಸ್ತ್ರಿಗಳು ಶಾಲನ್ನು ಮುಸುಗುಹಾಕಿಕೊಂಡು ಮಲಗಿದ್ದರು. ಶ್ರೀಯಪ್ಪಾ ಚಾರ್ಯರ ಪತ್ರವನ್ನು ತಂದ ಮನುಷ್ಯನಿಂದ ಅದನ್ನು ಒಂ ದುಸಾರಿ ಓದಿಸಿ ಕೇಳಿ ಪುನಃ ಅದನ್ನು ಹಿಂತಿರುಗಿ ತೆಗೆದು ಕೊಂಡುಹೋಗಿ ಸ್ವಾಮಿಗಳಲ್ಲಿ ಕೊಡುವಂತೆ ಹೇಳಿ ಕಳು ಹಿಸಿಬಿಟ್ಟರು. ಸ್ವಾಮಿಗಳು ಮೇಲುಕೋಟೆಗೆ ಹೋದ್ದನ್ನು ತಿಳಿದು ಶ್ರೀಯಪ್ಪಾಚಾರ್ಯರೂ ಸಹಾ ಮೈಸೂರಿಂದ ಹೊರ ಟುಹೋದರು. ರಾಮಶಾಸ್ತ್ರಿಗಳು ಇವರನ್ನು ಅರಿಸಿಕೊಂಡು

ಮೇಲುಕೋಟೆಗೆ ಹೋಗಲು, ಅಲ್ಲಿ ಆ ದೇಶಾಂತರದ ಪಂಡಿತರು ಪರಕಾಲಮಠದಲ್ಲಿ ಸಿಕ್ಕಿದರು. ಅವರನ್ನು ರಾಮಶಾಸ್ತ್ರಿಗಳು ಬಿಡದೆ ವಾಕ್ಯಾರ್ಥಕ್ಕೆ ಎಳೆದು, ತ್ರಿಯಂಬಕಶಾಸ್ತ್ರಿಗಳ ಸಿದ್ಧಾಂತವನ್ನು ಖಂಡನೆಮಾಡಿ ಬರೆದಿರುವ ಅಂಶವನ್ನು ಸ್ಥಿರಪಡಿಸದೆ ಇದ್ದರೆ ತಾವು ಬಿಡಲಾರೆವೆಂದು ಖಂಡಿತವಾಗಿ ಶ್ರಿಯಪ್ಪಾಚಾರ್ಯರಿಗೆ ಹೇಳಿದ್ದೂ ಅಲ್ಲದೆ, ಮುನ್ನಾದಿವಸ ಸ್ವಾಮಿಗಳ ಮೂಲಕವಾಗಿ ಬಂದಿದ್ದ ಶ್ರಿಯಪ್ಪಾಚಾರ್ಯರ ಖಂಡನ ಪತ್ರಗಳಲ್ಲಿ ಒಂದೊಂದು ಅಕ್ಷರವನ್ನೂ ಖಂಡಿಸಿ ಸ್ವಾಮಿಗಳ ಸನ್ನಿಧಾನಕ್ಕೆ ಕಳುಹಿಸಿದರು. ರಾಮಶಾಸ್ತ್ರಿಗಳು ಒಂದುಸಾರಿ ಓದಿಸಿ ಕೇಳಿದಮಾತ್ರಕ್ಕೆ ಅದೆಲ್ಲವನ್ನೂ ಜ್ಞಾಪಕದಲ್ಲಿರಿಸಿಕೊಂಡು ಬರೆದು ಅದರಮೇಲೆ ಪೂರ್ವಪಕ್ಷವನ್ನೂ ಬರೆದ ಶಕ್ತಿಯು ಅದ್ಭುತವಾದ್ದೇ ಸರಿ. ಅದಕ್ಕೆ ಆಚಾರ್ಯರು—ನಾನು ತ್ರಿಯಂಬಕಶಾಸ್ತ್ರಿಗಳ ಸಿದ್ಧಾಂತವನ್ನು ಖಂಡಿಸಿ ಪತ್ರಗಳನ್ನು ಬರೆಯಲಿಲ್ಲ, ನಮ್ಮ ದ್ವೈತಸಿದ್ಧಾನ್ತದ ಟಿಪ್ಪಣಿಯನ್ನು ಮಾತ್ರ ಬರೆದಿದೇನೆ ಎಂದು ಉತ್ತರ ಕೊಟ್ಟರು. ಸ್ವಾಮಿಗಳು ಇದಕ್ಕೆ ಅಪಲಾಪವೆಂದು ಬಾಯಾರ ಹೇಳಲಾರದೆ ಮನಸ್ಸಂಕೋಚಮಾಡಿಕೊಂಡು, ತಾವು ಸ್ವಲ್ಪ ತಟಸ್ಥರಾದರು. ಶ್ರಿಯಪ್ಪಾಚಾರ್ಯರು ಮಾರನೇ ದಿವಸ ಬರುವುದಾಗಿ ರಾಮಶಾಸ್ತ್ರಿಗಳೊಡನೆ ಸಮ

ಯ ಬಂಧವನ್ನು ಮಾಡಿಕೊಂಡು ಯಾರಿಗೂ ಹೇಳದಂತೆ ರಾತ್ರಿಯೇ ಬೆಂಗಳೂರಿಗೆ ಹೊರಟುಹೋಗಿ ಕೋಲಾರದ ಶಾಮರಾಯರೆಂಬುವರ ಮನೆಯಲ್ಲಿ ಇಳಿದುಕೊಂಡರು. ಕೃಷ್ಣರಾಜ ಒಡೆಯರವರಿಗೆ ಈ ಸಂಗತಿ ತಿಳಿಯಿತು. ರಾಮಶಾಸ್ತ್ರಿಗಳು ಶ್ರೀಯಪ್ಪಾಚಾರ್ಯರ ಬೆನ್ನಹತ್ತಿ ಬೆಂಗಳೂರಿಗೂ ಹೋಗಬೇಕೆಂದು ಇರುವುದಾಗಿ ದೊರೆಯು ವರ್ತಮಾನವನ್ನು ಕೇಳಿ, ರಾಮಶಾಸ್ತ್ರಿಗಳನ್ನು ಕುರಿತು — ಸತ್ತ ಮನುಷ್ಯನನ್ನು ಕೊಲ್ಲುವುದು ಯಾಕೆ ಶಾಸ್ತ್ರಿಗಳೆ? ಎಂದು ಅಪ್ಪಣೆಕೊಟ್ಟರು. ಆಗ ರಾಮಶಾಸ್ತ್ರಿಗಳು—ಶ್ರೀಯಪ್ಪಾಚಾರ್ಯರಮೇಲೆ ನನಗೇನೂ ಕ್ರೋಧವಿಲ್ಲ, ಪಾಂಡಿತ್ಯಕ್ಕೆ ನಿಧಿಗಳಾಗಿರುವ ತ್ರಿಯಂಬಕಶಾಸ್ತ್ರಿಗಳೂ ನನಗೆ ಗುರುಗಳಾಗಬೇಕು. ಅಂಥಾ ದೊಡ್ಡವರ ಸಿದ್ಧಾಂತವನ್ನು ತಾನು ಖಂಡಿಸುತ್ತೇನೆಂದು ದೇಶದೇಶಗಳಲ್ಲೆಲ್ಲಾ ಹೇಳಿಕೊಂಡು ತಿರಗುತಾ ಈ ಸೀಮೆಗೂ ಬಂದು ವಾದಕ್ಕೆ ನಿಲ್ಲದೆ ತಪ್ಪಿಸಿಕೊಂಡು ಸ್ಥಳವನ್ನು ಬಿಟ್ಟು ಗುಟ್ಟಾಗಿ ಹೊರಟುಹೋಗಿ, ತನ್ನ ಸಿದ್ಧಾಂತವನ್ನು ಖಂಡಿಸತಕ್ಕವರು ಮೈಸೂರಲ್ಲಿ ಯಾರೂ ಇಲ್ಲವೆಂದು ಇತರಕಡೆ ಶ್ರೀಯಪ್ಪಾಚಾರ್ಯರು ಕೊಚ್ಚಿಕೊಂಡರೆ, ಇಲ್ಲಿದ್ದವರ ಪಾಂಡಿತ್ಯವು ಮಸಣಿಸಿದಂತೆಯೇ ಆಯಿತು; ಅದು ಹಾಗಿರಲಿ; ಸಕಲ ವಿದ್ವಾಂಸರಿಗೂ ತಾ

ರುಮನೆಯಾಗಿರುವ ಈ ಕರ್ಣಾಟಕ ಸಂಸ್ಥಾನದಲ್ಲಿ ಮಹಾಸ್ವಾಮಿಯ ಆಸ್ಥಾನವು ನಾಮಮಾತ್ರದ್ದಾಯಿತೆಂದು ದೇಶಾಂತರದಲ್ಲಿ ಜನರು ಆಡಿಕೊಂಡರೆ ಇಷ್ಟು, ದಿವಸವೂ ಸ್ವಾಮಿಯ ಉಪ್ಪಿನಿಂದ ಬೆಳೆದ ನಾವುಗಳೆಲ್ಲಾ ಜೀವನ್ಮೃತರಾಗುತೇವೆಯಲ್ಲಾ, ಮಹಾಸ್ವಾಮಿ. ಅಪ್ಪಣೆಯಾದಮೇಲೆ ಆತನ ಹಿಂದಟ್ಟಿ ನಾನು ಹೋಗುವುದಿಲ್ಲವೆಂದು, ಅರಿಕೆಮಾಡಿದರು. ಆದಾಗ್ಯೂ ಶ್ರೀಯಪ್ಪಾಚಾರ್ಯರ ಸಿದ್ಧಾಂತವನ್ನು ಖಂಡನಮಾಡಿ ಒಂದು ಪ್ರಬಂಧವನ್ನೂ ಎರಡು ಶ್ಲೋಕಗಳನ್ನೂ ಬರೆದು ಬೆಂಗಳೂರಿಗೆ ಬಂಗಲೀ ಚೌಡಪ್ಪನವರಿಗೆ ಕಳುಹಿಸಿದರು. ಆ ಶ್ಲೋಕಗಳು ರಾಮಶಾಸ್ತ್ರಿಗಳ ಸ್ವಹಸ್ತಾಕ್ಷರದಲ್ಲಿಯೇ ಇರುವಂತೆ ಛಾಪಿಸಿದೆ.

ಶ್ರೀಗುರು ಘೋಂಬಿಕಾಮುಃ ಕಪಾಲಪತ್ರಿ ಭಗನಿ
ಷ್ಟಾಂತಾಪರಿಬ್ರಹ್ಮ ವಿಜೃಂಭಿತಾಂ। ಬುಯ್ಯ
ವೇದಾಂತಸಿದ್ಧಾಂತಾ ಬ್ರಹ್ಮಕೆ ವಿನ್ಷಿತ
ಮೂರ್ತಿಕಾಂ॥ ಶ್ರೀಯುತಃ ಅಪ್ಪಾಚಾರ್ಯವಿರಚಿ
ತಾಂ ಪ್ರತಿಪಂದಿ ಪಿಶಾಚಿಕಾಂ ನಿದ್ಧಾಂತ
ಸಂತ್ರಪರಕಾಂ ದಾವರಂಯಾ ಮುಖಿ ಸೋದರಃ॥೧॥

ಅರ್ಥ॥ ನವೀನ ಪ್ರಾಚೀನ ಸಿದ್ಧಾಂತಗಳನ್ನರಿಯದೆ ಇರೋಣದರಿಂದ ವಿಜೃಂಭಿಸುತ್ತಲಿರುವ ನ್ಯಾಯವೇದಾಂತ ಶಾಸ್ತ್ರಗಳ ಅಜ್ಞಾನದಿಂದ ಕಲ್ಪಿತವಾದ ಮೂರ್ತಿಯುಳ್ಳಂಥ ಶ್ರೀಯಪ್ಪಾಚಾರ್ಯರಿಂದ ರಚಿತವಾದ ಪ್ರತಿಬಂದಿ ಎಂಬ ಪಿಶಾಚವನ್ನು ಸಿದ್ಧಾಂತವೆಂಬ ಮಂತ್ರಪಠನದಿಂದ ವಿನೋದವಾಗಿ ನಿವಾರಣೆ ಮಾಡುತ್ತೇನೆ.

ಬಂಗಲೀ ಚೌಡಪ್ಪನವರು ರೆಸಿಡೆಂಟ್ ಸಾಹೇಬರವರ ಇಲಾಖೆಯಲ್ಲಿ ಹೆಡ್ ಶಿರಸ್ತೆ ಕೆಲಸದಲ್ಲಿದ್ದರು. ರೆಸಿಡೆಂಟ್ ಸಾಹೇಬರವರ ಬಂಗಲಿಯಲ್ಲಿ ಇವರಿಗೆ ಕೆಲಸವಿದ್ದ ಕಾರಣ ಇವರಿಗೆ ಬಂಗಲೀ ಚೌಡಯ್ಯನವರೆಂದು ಅಡ್ಡ ಹೆಸರಾಗಿತ್ತು. ಇವರು ಆಗ್ಗೆ ದೊಡ್ಡದೆಂದು ಎನ್ನಿಸಿಕೊಂಡಿದ್ದ ಅಧಿಕಾರದಲ್ಲಿದ್ದರೂ ಕೂಡ ಪೂರ್ವಾಚಾರವನ್ನು ಬಿಟ್ಟು ಅನಾಚಾರವನ್ನು ಅವಲಂಬಿಸಿ ಮೆರೆಯುತಾ ಇರಲಿಲ್ಲ. ತುಂಬಾ ಆಸ್ತಿಕರಾಗಿ ದೇಶೀಯರಲ್ಲಿಯೂ ವಿದ್ವಾಂಸರಲ್ಲಿಯೂ ವಿಶೇಷವಾಗಿ ವಿಶ್ವಾಸವನ್ನು ಇಟ್ಟುಕೊಂಡಿದ್ದರು. ಮೇಲಿನ ಶ್ಲೋಕಯುಕ್ತವಾದ ಪ್ರಬಂಧವು ಬೆಂಗಳೂರಿಗೆ ಬಂದು ತಲಪಿದಕೂಡಲೆ, ಕೋಲಾರದ ಶಾಮರಾಯರ ಮನೆಯಲ್ಲಿ ಇಳಿದಿದ್ದ ಶ್ರೀಯಪ್ಪಾಚಾರ್ಯರಿಗೆ ಇದು ಖಂಡಿತ

ವಾಗಿ ತಲಪಲಿಲ್ಲವೆಂದು ಹೇಳದಹಾಗೆ, ಶ್ರಿಯಪ್ಪಾಚಾರ್ಯರು ಊಟಮಾಡುತ್ತಿರುವಾಗ, ಮೇಲೆ ಕಾಣಿಸಿರುವ ಪ್ರಬಂಧವನ್ನು ಚೌಡಪ್ಪನವರು ಕಳುಹಿಸಿದರು. ಅದಕ್ಕೆ ಯಾವ ಉತ್ತರವನ್ನೂ ಕೊಡದೆ ಶ್ರಿಯಪ್ಪಾಚಾರ್ಯರು ಬೆಂಗಳೂರಿಂದ ಹೊರಟುಹೋದರು. ತರುವಾಯ ಅತನು ಏನಾದರೋ ಗೊತ್ತಾಗಲಿಲ್ಲ. ಈ ಶ್ರಿಯಪ್ಪಾಚಾರ್ಯರಿಗೆ ಆದ ಅಪಮಾನಕ್ಕೆ ಮಾಧ್ವರು ಕೆಲವರು ಕಳವಳಗೊಂಡು ಸಮಯವನ್ನು ಹುಡುಕುತಾ ಇದ್ದರು.

ಮಾಧ್ವರಲ್ಲಿ ಉತ್ತರಾದಿ ಮಠವು ಭಾರಿ ಮಠವಾಗಿರುತ್ತದೆ. ಇದಕ್ಕೆ ದೊಡ್ಡ ಮಠವೆಂದು ವೈಷ್ಣವರಲ್ಲಿ ಹೆಸರಾಗಿದೆ. ಈ ಮಠಕ್ಕೆ ಮೈಸೂರು ಹೈದರಾಬಾದು ಮೊದಲಾಗಿ ಅನೇಕ ಸಂಸ್ಥಾನಗಳಲ್ಲಿ ವಿಶೇಷವಾಗಿ ಆದಾಯವಿರುವ ಭಾರಿಯಾದ ಜಹಗೀರುಗಳೂ ವೃತ್ತಿಗಳೂ ಇರುವುದೂ ಅಲ್ಲದೆ, ಜವಾಹಿರು ಮೊದಲಾದ ಐಶ್ವರ್ಯ ಹೆಚ್ಚಾಗಿದೆ. ಅನೇಕ ಜನ ವೈಷ್ಣವರು ಈ ಮಠಕ್ಕೆ ಸೇರಿದವರಾಗಿದಾರೆ. ಸಾಧಾರಣವಾಗಿ ಈ ಸಂಸ್ಥಾನಕ್ಕೆ ಬಹಳ ಯೋಗ್ಯರಾಗಿಯೂ ದೊಡ್ಡ ಪಂಡಿತರಾಗಿಯೂ ಇರುವರಿಗೆ ಆಶ್ರಮವಾಗುವುದು. ಇಲ್ಲಿ ಹಲವು ವಿದ್ವಾಂಸರೂ ಇರುತಾರೆ. ಪ್ರಾಚೀನ ಪದ್ಧತಿಯನ್ನು ತಪ್ಪಿಸದಹಾಗೆ

ಯೋಗ್ಯರಾದ ಗೂಳೀ ಬಾಳಾಚಾರ್ಯರೆಂಬುವರಿಗೆ ಈ ಮಠದಲ್ಲಿ ಪಟ್ಟವಾಯಿತು. ಕೆಲವು ವರುಷಗಳಹಿಂದೆ ಮೈಸೂರಿಗೆ ಪೂನಾಸಂಸ್ಥಾನದಿಂದ ತ್ರಿಯಂಬಕಶಾಸ್ತ್ರಿಗಳು ಬಂದಿದ್ದಾಗ, ಅರಮನೆಯಲ್ಲಿ ಆಸ್ಥಾನದ ವಿದ್ವಾಂಸರೊಡನೆ ನಡೆದ ವಾಕ್ಯಾರ್ಥವಿಚಾರ ಹಿಂದೆ ಕಾಣಿಸಿದೆ. ಆ ಕಾಲದಲ್ಲಿ ವಿದ್ವಾಂಸರಾದ ಬಾಳಾಚಾರ್ಯರು ವಿಶೇಷವಾದ ವಾಗ್ಧೋರಣೆಯಿಂದ ಮುಂದರಿದು ಚರ್ಚೆಯನ್ನು ನಡಿಸಲು ಯತ್ನಿಸಿದರು. ಆಗ ತ್ರಿಯಂಬಕಶಾಸ್ತ್ರಿಗಳು—ಈ ಬಾಳಾಚಾರ್ಯರು ಗೂಳಿಯಹಾಗೆ ಮೇಲೆ ಬಿದ್ದು ಮಾತನಾಡುತಾರೆ, ಎಂದು ಹೇಳಿದರು. ಅಂದಿನಿಂದ ಶ್ರೀ ಕೃಷ್ಣರಾಜ ಒಡೆಯರವರು ಇವರಿಗೆ ಗೂಳೀ ಬಾಳಾಚಾರ್ಯರೆಂದು ಅಡ್ಡ ಹೆಸರನ್ನು ಇಟ್ಟರು. ಹೀಗೆ ಜುಲಪಿ ಕೃಷ್ಣಾಚಾರ್ಯರು, ಒಂಟೆ ರಾಮಾಚಾರ್ಯರು, ಪಾಯಸದ ಕೃಷ್ಣ, ಪ್ರೇತ ನರಸಿಂಹ ಶಾಸ್ತ್ರಿಗಳು, ಹಾಗೂಬೇಳೆ ರಾಮರಾಯರು, ಮುಚ್ಚಿಗಣ್ಣು ಶ್ರೀನಿವಾಸರಾಯರು ಎಂಬದಾಗಿ ವಿಧವಿಧವಾದ ಅಡ್ಡ ಹೆಸರುಗಳನ್ನು ಕೃಷ್ಣರಾಜ ಒಡೆಯರವರು ಜನರಿಗೆ ಕುಚೋದ್ಯಕ್ಕಾಗಿ ಇಡುತಾ ಇದ್ದರು.

ಉತ್ತರಾದಿ ಮಠದಲ್ಲಿ ತಿಮ್ಮಣ್ಣಾಚಾರ್ಯರೆಂಬ ಒಳ್ಳೇ ವಿದ್ವಾಂಸರು ಇದ್ದರು. ಶ್ರೀಯಪ್ಪಾಚಾರ್ಯರಿಗೆ ಆದ

ಅಪಮಾನಕ್ಕಾಗಿ ಈ ರಾಮಶಾಸ್ತ್ರಿಗಳ ಕೊಬ್ಬನ್ನು ಮುರಿಯಬೇಕೆಂದು ಕೆಲವು ವೈಷ್ಣವಶಿಖಾಮಣಿಗಳು ಬದ್ಧಕಂಕಣರಾದರು. ಉತ್ತರಾದಿ ಸ್ವಾಮಿಗಳು ಮೈಸೂರಿಗೆ ಬಂದರು. ತಿಮ್ಮಣ್ಣಾಚಾರ್ಯರಿಗೂ ರಾಮಶಾಸ್ತ್ರಿಗಳಿಗೂ ವಾಕ್ಯಾರ್ಥ ನಡೆಯಲು ಕೃಷ್ಣರಾಜ ಪ್ರಭುಗಳ ಆಸ್ಥಾನದಲ್ಲಿ ತಕ್ಕ ಏರ್ಪಾಡಾಯಿತು. ಪೂರ್ವಾಶ್ರಮದಲ್ಲಿ ಗೋಳೀ ಬಾಳಾಚಾರ್ಯರಾಗಿದ್ದ ಸ್ವಾಮಿಗಳೂ ದಯಮಾಡಿಸಿದ್ದರು. ವಿದ್ವಾಂಸರೆಲ್ಲರೂ ಸೇರಿದರು. ಪ್ರಸಂಗಕ್ಕೆ ಆರಂಭವಾಗಿ ಸ್ವಲ್ಪ ದೂರ ಜರುಗಿತು. ಶಾಸ್ತ್ರಿಗಳ ಕೋಟಿಯು ತಿಮ್ಮಣ್ಣಾಚಾರ್ಯರ ಮೇಲೆ ವಿಶೇಷವಾಗಿ ಏರುತಾ ಬಂತು. ತಿಮ್ಮಣ್ಣಾಚಾರ್ಯರು ಉತ್ತರಕೊಡಲು ಸಾಧ್ಯವಾಗದೇ ಹೋಯಿತು. ಕೊನೆಗೆ ರಾಮಶಾಸ್ತ್ರಿಗಳು—ಮಠದ ವಿದ್ವಾಂಸರಿಗೆ ವಾಕ್ಸ್ತಂಭವಾಯಿತು, ಕುಣಿಯುವುದಕ್ಕೆ ಬಂದಮೇಲೆ ಮುಸುಕೇನು? ಇಲ್ಲಿ ಯಾರಾದರೂ ಸರಿಯೆ, ಸಮನ್ವಯಮಾಡಿ ನನಗೆ ಉತ್ತರವನ್ನು ಅಪ್ಪಣೆ ಕೊಡಿಸಬಹುದು, ಎಂದು ತುಂಬಿದ ಸಭೆಯಲ್ಲಿ ಹೇಳಿದರು. ಆಗ ಚತುರರಾದ ಮತ್ತು ದೂರ ದೃಷ್ಟಿಯುಳ್ಳ ಪ್ರಭುವು ಅಲ್ಲಿಗೆ ಚರ್ಚೆಯನ್ನು ನಿಲ್ಲಿಸಿ ಅರಮನೆಯಲ್ಲಿ ವಿದ್ವಾಂಸರಿಗೆ ಮರ್ಯಾದೆ ಮಾಡಿದರು. ದರಬಾರನ್ನು ಬಿಟ್ಟು ಎಲ್ಲರೂ ಏಳುವ ಸಮಯದಲ್ಲಿ ದೊರೆಯನ್ನು

ಕುರಿತು—ಪ್ರಭುವೇ, ನಾನು ಹಲವುಕಡೆ ಪ್ರಸಂಗವಾಡಿದೆ. ರಾಮಶಾಸ್ತ್ರಿಗಳಂಥ ದೊಡ್ಡ ಪಂಡಿತರನ್ನು ನಾನು ಎಲ್ಲಿಯೂ ಕಾಣಲಿಲ್ಲ, ಎಂದು ತಿಮ್ಮಣ್ಣಾಚಾರ್ಯರು ಸ್ತೋತ್ರಮಾಡಿದರು.

---

## ೭ನೇ ಅಧ್ಯಾಯ

### ದಕ್ಷಿಣದೇಶಸಂಚಾರ (ಮೊದಲುಸಾರಿ).

---

ರಾಮಶಾಸ್ತ್ರಿಗಳಿಗೆ ಮೊದಲು ನಾಲ್ಕು ಗಂಡು ಮಕ್ಕಳಾದವು. ಅವುಗಳೆಲ್ಲಾ ಹೊಲೇಮನೆಯಲ್ಲಿಯೇ ಸತ್ತುಹೋದವು. ಇದರಿಂದ ಶಾಸ್ತ್ರಿಗಳ ಮನಸ್ಸಿಗೆ ಖೇದವುಂಟಾಗಿ ರಾಮೇಶ್ವರಕ್ಕೆ ಹೋಗಬೇಕೆಂದು ಯೋಚಿಸಿದರು. ಆಗ ಕೃಷ್ಣರಾಜಪ್ರಭುಗಳು ತಮ್ಮ ಆಸ್ಥಾನದ ದೊಡ್ಡ ವಿದ್ವಾಂಸರ ಗೌರವಕ್ಕೆ ಅಗತ್ಯವಾದ ಚಿಹ್ನೆಗಳು ಇರಬೇಕೆಂದು ಶಾಸ್ತ್ರಿಗಳಿಗೆ ಛತ್ರ ಚಾಮರ ಮುಂತಾದ್ದನ್ನು ಕೊಟ್ಟರು. ಶಾಸ್ತ್ರಿಗಳು ಮಿತರಾದ ಶಿಷ್ಯರೊದಗೂಡಿ ಸಂಸಾರಸಮೇತರಾಗಿ ರಾಜಾಸ್ಥಾನದಲ್ಲಿ ಕೊಟ್ಟ ಬಿರುದುಗಳನ್ನು ತೆಗೆಯಿಸಿಕೊಂಡು ಹೊರಟರು. ಯಾತ್ರೆಯಾಯಿತು. ತರುವಾಯ ನಾಗಪ್ರತಿಷ್ಠೆಯನ್ನೂ ಮಾಡಿದರು. ಶಾರ್ವರಿ ಸಂವತ್ಸರದ ವೈಶಾಖ ಶುದ್ಧದಲ್ಲಿ ನರಸಿಂಹಜಯಂತಿ ದಿವಸ ಗಂಡು

ಮಗ ಹುಟ್ಟಿದನು. ಈತನಿಗೆ ಲಕ್ಷ್ಮೀನರಸಿಂಹನೆಂದು ನಾಮಕರಣ ಮಾಡಿದರು. ಈತನೇ ಈಚೆಗೆ ಪ್ರಸಿದ್ಧನಾದ ಮಹಾ ಪಂಡಿತ ಲಕ್ಷ್ಮೀನರಸಿಂಹಶಾಸ್ತ್ರಿಗಳು.

ತಂದೆಯು ಮಗನಲ್ಲಿ ವಿಶೇಷ ಪ್ರೇಮವುಳ್ಳವರಾಗಿದ್ದರು. ಈತನನ್ನು ಎಲ್ಲಿಗೆ ಹೋದರೂ ಕರೆದುಕೊಂಡು ಹೋಗುತಾ ಇದ್ದರು. ಮಗನಿಗೆ ತಾವೇ ಸ್ನಾನವನ್ನು ಮಾಡಿಸಿ ಮೈಯನ್ನು ಉಜ್ಜಿ ವರಸಿ ತಲೆಯನ್ನು ಕೊಡವಿ ಗಂಟುಹಾಕುತಾ ಇದ್ದರು. ಕೇವಲ ಬಾಲ್ಯದಲ್ಲಿಯೇ ವಿದ್ಯಾಭ್ಯಾಸಕ್ಕೆ ಆರಂಭವಮಾಡಿದರು. ಈ ಬಾಲಕನ ಬುದ್ಧಿಯು ಬಹು ಚುರುಕಾಗಿತ್ತು. ಏಕ ಸಂಧಿಗ್ರಾಹಿ, ದ್ವಿಸಂಧಿಗ್ರಾಹಿ ಎಂಬದಾಗಿ ಕಥೆಗಳಲ್ಲಿ ಕೇಳಿದೇವೆ. ಅದು ಈ ಲಕ್ಷ್ಮೀನರಸಿಂಹನೆಂಬ ಬಾಲಕನಲ್ಲಿ ಪ್ರತ್ಯಕ್ಷವಾಗಿತ್ತು. ಈತನಿಗೆ ೯ನೇ ವಯಸ್ಸಿನಲ್ಲಿಯೇ ರಾಮಶಾಸ್ತ್ರಿಗಳು ನ್ಯಾಯಶಾಸ್ತ್ರದಲ್ಲಿ ಪಾಠವನ್ನು ಹೇಳಿದರು.

ಸಹಪಾಠಿಗಳಾದ ಇತರ ಹುಡುಗರ ಸಂಗಡ ಶಾಸ್ತ್ರಿಗಳೇ ಲಕ್ಷ್ಮೀನರಸಿಂಹನಿಗೂ ಪಾಠವನ್ನು ಹೇಳುತಾ ಕೂತುಕೊಳ್ಳುತಿದ್ದರು. ಆಗ ಈ ಹುಡುಗನು ತಂದೆ ಹೇಳಿದ ಪಾಠದಮೇಲೆ ಒಂದು ಆಕ್ಷೇಪಣೆಯನ್ನು ಯೋಚಿಸಿ ಹೇಳಿ ತಂದೆಯು ಅದಕ್ಕೆ ಉತ್ತರ ಹೇಳುವವರೆಗೂ ತಾನು

ಗೋಲಿ ಚೆಂಡು ಚಿಣ್ಣಿಕೋಲು ಇವುಗಳನ್ನು ಇತರ ಹುಡುಗರ ಸಂಗಡ ಆಡಲು ಹೊರಟುಹೋಗುತ್ತಿದ್ದನು. ಶಾಸ್ತ್ರಿಗಳು ಮಗ ಕೇಳಿದ ಪ್ರಶ್ನೆಗೆ ಉತ್ತರ ಹೇಳಲು ಗ್ರಂಥವನ್ನು ಪುನಹ ನೋಡಿ ತಾವು ಸ್ವತಃ ಯೋಚಿಸಿ ವಿಷಯವನ್ನು ಸಮನ್ವಯ ಮಾಡಿಕೊಂಡು, ಮಗನನ್ನು ಕರೆದು ಆತನ ಆಕ್ಷೇಪಣೆಗೆ ಸಮಾಧಾನವನ್ನು ಹೇಳಿ ಮುಂದೆ ಪಾಠವನ್ನು ಸಾಗಿಸುತಾ ಇದ್ದರು. ಕೂಡಲೆ ಬಾಲಕನು ಪುನಃ ತಂದೆ ಹೇಳಿದ್ದಕ್ಕೆ ಆಕ್ಷೇಪಣೆಯನ್ನು ಮಾಡಿ ಪುನಃ ಆಡುವುದಕ್ಕೆ ಹೋಗುತ್ತಿದ್ದನು. ಹೀಗೆ ಮಾಡಿದಾಗ್ಗೂ ಹುಡುಗಮಾತೆಂದು ಅಲಕ್ಷ್ಯದಿಂದ ಅಸಮಾಧಾನಪಟ್ಟುಕೊಳ್ಳದೆ ಹುಡುಕಿ ಹುಡುಗನಿಗೆ ಉತ್ತರವನ್ನು ಕೊಡುತಾ ಇದ್ದ ಸಹನವನ್ನು ಲೋಕದಲ್ಲಿರುವ ಉಪಾಧ್ಯಾಯರು ಕೇಳಿ ಬುದ್ಧಿವಂತರಾಗಲೆಂದು ಈ ಅಂಶವನ್ನು ಇಲ್ಲಿ ಬರೆದಿದೆಯೇ ಹೊರತು, ೯ ವರುಷದ ಹುಡುಗನಿಗೆ ಆ ಮಹಾ ಪಂಡಿತರಮೇಲೆ ಆಕ್ಷೇಪಣೆ ಮಾಡುವಷ್ಟು ಚತುರತೆ ಬಾಲ್ಯದಲ್ಲಿಯೇ ಇತ್ತೆಂದು ಹೇಳುವುದಕ್ಕೆ ಮಾತ್ರವೇ ಅಲ್ಲ.

ಇದು ಹಾಗಿರಲಿ. ರಾಮಶಾಸ್ತ್ರಿಗಳು ಕ್ರೋಧಿಸಂವತ್ಸರದಲ್ಲಿ ದಕ್ಷಿಣದೇಶಕ್ಕೆ ಸಂಚಾರಕ್ಕಾಗಿ ಶಿಷ್ಯರೊಡಗೂಡಿ ಹೊರಟರು. ಅದುವರೆಗೆ ಇವರಿಗೆ ೩೭ ವರುಷವಾಗಿತ್ತು.

ಪ್ರಸಿದ್ಧವಾದ ಸ್ಥಳಗಳಲ್ಲಿ ಕೆಲವು ದಿವಸ ನಿಂತು ಮುಂದಕ್ಕೆ ಹೋಗುತಾ ಬಂದರು. ಅಲ್ಲಿಯೂ ಶಿಷ್ಯಗೋಷ್ಠಿಯು ವಿಶೇಷವಾಗಿಯೇ ಇತ್ತು. ಹೊಸದಾಗಿ ಶಿಷ್ಯಸಂಪಾದನೆಯಾಯಿತು. ಮನ್ನಾರಗುಡಿ ಗೋಪಾಲಶಾಸ್ತ್ರಿ, ರಾಜುಶಾಸ್ತ್ರಿ, ಇವರು ಆಕಡೆ ದೊಡ್ಡ ವಿದ್ವಾಂಸರೆನ್ನಿಸಿಕೊಂಡಿದ್ದರು. ಅವರಿಬ್ಬರೂ ರಾಮಶಾಸ್ತ್ರಿಗಳಲ್ಲಿ ಮಾರ್ಗತ್ವೇನ ಹೋಗುತಾ ಇರುವಾಗಲೇ ಕೆಲವು ಉದ್ಗ್ರಂಥಗಳನ್ನು ಓದಿದರು. ಇವರೆಲ್ಲರೂ ಸೇರಿ ಶಾಸ್ತ್ರಿಗಳನ್ನು ಪುದುಕೋಟೆಗೆ ಕರೆದುಕೊಂಡು ಹೋದರು. ಈ ಸಂಸ್ಥಾನವು ಪೂರ್ವದಿಂದಲೂ ಹೆಸರಾಗಿ ನೆಲೆಸಿರತಕ್ಕದ್ದು. ಇಂಥಾ ಸಂಸ್ಥಾನಗಳಲ್ಲಿ ಹೋಗಿ ವಾದದಿಂದ ಪಾಂಡಿತ್ಯಪ್ರಕಾಶ ಮಾಡುವುದೂ, ಅಲ್ಲಿರಬಹುದಾದ ವಿದ್ವಾಂಸರನ್ನು ಗೆದ್ದು ಜಯರೇಖೆಯನ್ನು ಪಡೆಯುವುದೂ ಇವೆರಡೂ ಶಾಸ್ತ್ರಿಗಳಿಗೆ ಉದ್ದೇಶವಾಗಿದ್ದವು. ಈ ಎರಡೂ ಇಲ್ಲಿ ನೆರವೇರಿದವು.

ಪುದುಕೋಟೆಯಲ್ಲಿ ಮೈಸೂರ ಸಂಸ್ಥಾನದಿಂದ ದೊಡ್ಡ ಪಂಡಿತರು ಬಂದಿದಾರೆಂದು ವರ್ತಮಾನ ಹರಡಿಕೊಂಡಿತು. ಮೈಸೂರ ಕೃಷ್ಣರಾಜ ಒಡೆಯರ ಆಸ್ಥಾನವು ಪೇಶ್ವೆ ಬಾಜಿರಾಯರ ಸಭೆಗೆ ಎರಡನೇದಾಗಿ ಅನೇಕ ಜನ ಪಂಡಿತರಿಗೆ ಆವಾಸಸ್ಥಾನವಾಗಿತ್ತು. ಧಾತು ಈಶ್ವರ ಸಂ

ವತ್ಸರಗಳಲ್ಲಿ ಕಂಪೆನಿ ಸರ್ಕಾರದವರಿಗೂ ಮರಾಟೆಯುವರಿಗೂ ದೊಡ್ಡದಾಗಿ ಯುದ್ಧ ನಡೆದು, ಬಾಜಿರಾಯರಿಗೆ ದೌಲತ್ತು ಹೋಯಿತು. ಅವರನ್ನು ಕಂಪೆನಿ ಸರ್ಕಾರದವರು ಕಾಶಿಬಳಿ ಇರುವ ಬ್ರಹ್ಮಾವರ್ತದಲ್ಲಿ ಸೆರೆಇಟ್ಟರು. ಮಹಾರಾಷ್ಟ್ರ ಚಕ್ರಾಧಿಪತ್ಯವಲ್ಲಾ ಛಿನ್ನಾಭಿನ್ನವಾಗಿ ಹೋಯಿತು. ಶ್ರೀಮಂತರ ಸಭೆಯಲ್ಲಿದ್ದ ವಿದ್ವಾಂಸರೆಲ್ಲಾ ಅವಲಂಬನವಿಲ್ಲದೆ ದಿಕ್ಕುದಿಕ್ಕಿಗ ಹೊರಟುಹೋದರು. ಪೂನೆಗೆ ಎರಡನೇದಾಗಿದ್ದ ಮೈಸೂರಲ್ಲಿ ಮಾತ್ರ ಆ ಮಹಾರಾಜನ ಔದಾರ್ಯವೆಂಬ ಕಲ್ಪವೃಕ್ಷವನ್ನು ಅನುಸರಿಸಿಕೊಂಡು ಅದರ ಫಲಗಳನ್ನು ತಿಂದುಕೊಂಡು ಪಂಡಿತಪಕ್ಷಿಗಳು ಜೀವಿಸುತಿದ್ದವು. ಆಗ್ಗೆ ದಕ್ಷಿಣದೇಶದಲ್ಲಿ ಮೈಸೂರ ಸಂಸ್ಥಾನದಲ್ಲಿ ಮಾತ್ರ ಪಾಂಡಿತ್ಯವು ಹತಶೇಷವಾಗಿ ನಿಂತು ಇದೆ ಎಂಬ ಪ್ರಖ್ಯಾತಿಯು ವ್ಯಾಪಿಸಿದ್ದಕಾರಣ ಅಂಥಾ ಮೈಸೂರಿಂದ ಬಂದ ವಿದ್ವಾಂಸರಾದ ರಾಮಶಾಸ್ತ್ರಿಗಳ ಪ್ರಶಂಸೆ ಹೆಚ್ಚಾಗಿ ಪುದುಕೋಟೆಯಲ್ಲಿ ಹರಡಿಕೊಂಡಿತು. ಶಾಸ್ತ್ರಿಗಳಿಗೆ ಅಲ್ಲಿನ ರಾಜರ ಭೇಟಿಯಾಯಿತು.

ಆ ಸಂಸ್ಥಾನದಲ್ಲಿ ಪಂಡಿತನಾದ ಬ್ರಹ್ಮಾಚಾರಿ ಎಂಬ ಒಬ್ಬ ವಿದ್ವಾಂಸನಿದ್ದನು. ಈತನಿಗೂ ರಾಮಶಾಸ್ತ್ರಿಗಳಿಗೂ ವಾಕ್ಯಾರ್ಥಕ್ಕೆ ಏರ್ಪಾಡಾಯಿತು. ಎದುರು ಕಕ್ಷಿಯು ಪ್ರ

ಸಂಗಕ್ಕೆ ಆರಂಭಮಾಡದೆ ಶಠತ್ವವನ್ನು ವಹಿಸಿದ್ದನು ಆಗ ರಾಮಶಾಸ್ತ್ರಿಗಳೇ ಆರಂಭಿಸಿ ಸ್ವಲ್ಪ ಹೊತ್ತಿನಲ್ಲಿ ಆ ಪಂಡಿತನಿಗೆ ವಾಕ್ಸ್ತಂಭವಮಾಡಿದರು. ಬ್ರಹ್ಮಚಾರಿಯು ಶಾಸ್ತ್ರಿಗಳ ವೈದುಷ್ಯ ಬಹು ದೊಡ್ಡದೆಂದು ಸ್ತೋತ್ರಮಾಡಿದನು. ಪುದುಕೋಟೆ ರಾಜರು ರಾಮಶಾಸ್ತ್ರಿಗಳಿಗೆ ಮೇಲ್ ತರದ ಬಹುಮಾನವನ್ನು ಕೊಟ್ಟರು. ಈಪ್ರಕಾರ ಜಯರೇಖೆಯನ್ನು ಹೊಂದಿ ಶಿಷ್ಯರ ಸಮೇತ ರಾಮಶಾಸ್ತ್ರಿಗಳು ಕಾಂಚೀಪುರಕ್ಕೆ ಪೋದರು.

ಕಾಂಚೀಪುರದಲ್ಲಿ ಪಂಡಿತರಾದ ಅನೇಕ ಜನ ಶ್ರೀವೈಷ್ಣವರು ಇದ್ದರು. ರಾಮಶಾಸ್ತ್ರಿಗಳು ಅಲ್ಲಿಗೆ ಪೋದ ತರುವಾಯ ಅವರಿಗೂ ಅಲ್ಲಿನ ವಿದ್ವಾಂಸರಿಗೂ ವಾಕ್ಯಾರ್ಥ ಜರಗಬೇಕೆಂದು ದಿವಸ ಗೊತ್ತಾಯಿತು. ಆ ಮಧ್ಯಕಾಲದಲ್ಲಿ ಶ್ರೀವೈಷ್ಣವ ಪಂಡಿತರು ಅನೇಕರು ಅನೇಕ ಗ್ರಂಥಗಳನ್ನು ಹಗಲು ರಾತ್ರೆ ಓದುತಾ ಪ್ರಸಂಗಕ್ಕೆ ಸಿದ್ಧಮಾಡಿಕೊಳ್ಳುತಿದ್ದರು. ರಾಮಶಾಸ್ತ್ರಿಗಳಾದರೋ ಸ್ನಾನಾಹ್ನಿಕಗಳನ್ನು ಮಾಡಿ ಶಿಷ್ಯರಿಗೆ ಪಾಠವನ್ನು ಹೇಳಿಕೊಂಡು ಸಾಧಾರಣವಾಗಿ ಕಾಲವನ್ನು ಕಳೆಯುತಾ ಇದ್ದರು. ಕಾಂಚೀಪುರದ ಸ್ಮಾರ್ತರೆಲ್ಲಾ ಸೇರಿ, ಶಾಸ್ತ್ರಿಗಳ ಪ್ರತಿಪಕ್ಷದವರು ಇವರಿಗೆ ಪರಿಭವವನ್ನುಂಟುಮಾಡಬೇಕೆಂದು ಸಿದ್ಧಮಾಡಿ

ಕೊಳ್ಳುತಾ ಹೆಚ್ಚಾಗಿ ವ್ಯಾಸಂಗ ಮಾಡುತಾ ಇದಾರೆ, ಶಾಸ್ತ್ರಿಗಳು ಮಾತ್ರ ಯಾವ ವ್ಯಾಸಂಗವೂ ಇಲ್ಲದೆ ಸುಮ್ಮನಿದ್ದಾರೆಯಲ್ಲಾ, ಅದ್ವೈತಮತಕ್ಕೆ ಯಾವ ಅಪಮಾನವಾಗುತ್ತೋ ಎಂದು ಕೂಟಸೇರಿ ಹೇಚಾಡುತಾ ಇದ್ದರು. ರಾಮಶಾಸ್ತ್ರಿಗಳು ಮೈಸೂರ ಸಂಸ್ಥಾನದಿಂದ ಬಂದಿರತಕ್ಕ ಪಂಡಿತರು. ತಾವೂ ಗ್ರಂಥಗಳನ್ನು ನೋಡಿಕೊಳ್ಳಬೇಕೆಂದು ಅವರಿಗೆ ಹೇಳುವುದು ಕಷ್ಟ. ಆದಾಗ್ಯೂ ಅವ್ವೂರಲ್ಲಿ ಮುಖಂಡರಾದ ಸ್ಮಾರ್ತರೆಲ್ಲಾ ಸೇರಿ ಶಾಸ್ತ್ರಿಗಳಲ್ಲಿ ಈ ಸಂಗತಿಯನ್ನು ತಿಳಿಸತಕ್ಕದ್ದೇ ಮೇಲು ಎಂದು ತಮ್ಮೊಳಗೆ ನಿಶ್ಚಯಿಸಿಕೊಂಡು, ಶಾಸ್ತ್ರಿಗಳ ಬಿಡಾರಕ್ಕೆ ಬಂದು ಅವರನ್ನು ಕುರಿತು ಬಂಡಿತವಾಗಿ ಅರಿಕೇ ಮಾಡಲಾರದೆ ಮನಸ್ಸಂಕೋಚವಾಡಿಕೊಳ್ಳುತಾ ಕೊನೆಗೆ ಧೈರ್ಯವಾಡಿದರು. ಇವರುಗಳಿಗೆ ಮರ್ಯಾದೆ ಮಾಡಿ ಇವರು ಬಂದ ಕಾರ್ಯವೇನೆಂದು ಶಾಸ್ತ್ರಿಗಳು ವಿಚಾರಿಸಲು, ಆ ಸ್ಥಳವಂತರು— ಮತ್ತೇನೂ ಇಲ್ಲ, ಪ್ರತಿಕಕ್ಷಿಯ ವಿದ್ವಾಂಸರೆಲ್ಲಾ ತಮ್ಮ ಮೇಲೆ ಪೂರ್ವಪಕ್ಷವಾಡಲು, ಅನೇಕ ಗ್ರಂಥಗಳನ್ನು ನೋಡಿ ವ್ಯಾಸಂಗ ಮಾಡುತಾ ಇದಾರೆ, ಈ ಮಾತನ್ನು ಅರಿಕೇ ಮಾಡಲು ಬಂದೆವು ಎಂದರು.

ಇವರ ಅಭಿಪ್ರಾಯವನ್ನು ತಿಳಿದುಕೊಂಡು ರಾಮ

ಶಾಸ್ತ್ರಿಗಳು ಅವರನ್ನು ನೋಡಿ—ಆತ್ಮಪ್ರಶಂಸೆ ಮಾಡಿಕೊಳ್ಳುವುದು ಶಾಸ್ತ್ರಕ್ಕೆ ವಿರುದ್ಧವಾದ್ದು. ಇದು ಉತ್ತಮ ಪುರುಷಲಕ್ಷಣವಲ್ಲ. ಮನುಷ್ಯನಲ್ಲಿ ಯೋಗ್ಯತೆ ಇದ್ದರೆ ತಾನೇ ಸಮಯದಲ್ಲಿ ಪ್ರಕಾಶಕ್ಕೆ ಬರುತ್ತೆ. ಹೀಗಿರುವಲ್ಲಿ ಆತ್ಮಸ್ತುತಿಯು ದುರಹಂಕಾರವೆನ್ನಿಸಿಕೊಳ್ಳುವುದಕ್ಕೆ ಸಂಶಯವಿಲ್ಲ. ಆದರೆ ಮನುಷ್ಯನ ನಿಜವಾದ ಶಕ್ತಿಯು ಹೊರಪಡುವುದಕ್ಕೆ ಮುಂಚೆಯಾಗಲಿ ಅಥವಾ ಹೊರಪಡಲು ಸರಿಯಾದ ಸಮಯ ದೊರೆಯದೇ ಆಗಲಿ ಅಸಂದರ್ಭವಾದಾಗ, ಹತ್ತು ಜನರ ವ್ಯಾಕುಲ ನಿವಾರಣೆಗೆ, ಅಥವ ಸುಳ್ಳನ್ನು ಅಡಗಿಸಿ ನಿಶ್ಚಯವನ್ನು ತೋರ್ಪಡಿಸುವುದಕ್ಕೆ, ಮಾಡಬೇಕಾದ ಆತ್ಮಪ್ರಶಂಸೆಯು ಅನಿವಾರ್ಯಪಕ್ಷವಾಗುವುದು. ಆದ್ದರಿಂದ ಹೇಳುತೇನೆ ಕೇಳಿ. ಈ ಸಂದರ್ಭದಲ್ಲಿ ಅತಿಶಯೋಕ್ತಿಯು ಕ್ಷಮಾರ್ಹವಾದ್ದೆಂದು ತಿಳಿಯಿರಿ. ಆ ಪರಮೇಶ್ವರನು ಕೈಲಾಸದಿಂದ ಬಂದು ವಾದಕ್ಕೆ ಕೂತುಕೊಂಡಾಗ್ಯೂ, ನನಗೆ ಸಮವಾಗಿ ವಾದಮಾಡಿಯಾನೇ ಹೊರತು ಆಗಲೂ ನಾನು ಸೋತುಹೋಗುತೇನೆಂಬ ಮಾತನ್ನು ಬಿಡಿ—ಎಂಬದಾಗಿ ಹೇಳಿದರು. ಸ್ವಪ್ರತಾಪವನ್ನು ಹೇಳಿಕೊಳ್ಳುವುದು ಶಾಸ್ತ್ರಿಗಳಿಗೆ ಇಷ್ಟವಿಲ್ಲದಿದ್ದರೂ, ಆ ಸಂದರ್ಭವೂ, ಪಾಂಡಿತ್ಯದ ಕೊಬ್ಬೂ ಸಹ ಸೇರಿ ಈ ಮಾತನ್ನು ಅವ

ರಿಂದ ಬಲವಂತವಾಗಿ ಹೊರಡಿಸಿದವು. ಬಂದಿದ್ದ ಮಹಾ ಜನರು ಶಾಸ್ತ್ರಿಗಳ ಮಾತಿಗೆ ಸಂತೋಷಪಟ್ಟು ಹೊರಟು ಹೋದರು. ಶಾಸ್ತ್ರಿಗಳಿಗೆ ಶಾಸ್ತ್ರಜ್ಞಾನವು ಎಷ್ಟು ನಿಷ್ಕರ್ಷೆ ಯಾಗಿತ್ತೆಂಬುವುದು ಇದರಿಂದ ಗೊತ್ತಾಗುತ್ತೆ.

ಹಿಂದಕ್ಕೆ ತ್ರಿಯಂಬಕಶಾಸ್ತ್ರಿಗಳು ಮೈಸೂರಿಗೆ ಬಂದಿದ್ದಾಗ ಕಾಂಚೀಪುರದ ಶ್ರೀನಿವಾಸಾಚಾರ್ಯರೆಂಬುವರು ಅವರೊಡನೆ ಪೂರ್ವಪಕ್ಷಸಿದ್ಧಾಂತಕ್ಕೆ ಕೂತು ಯತ್ನ ಜರಗದೆ ಸುಮ್ಮನಾದ ಸಂಗತಿ ಮೇಲೆ ಕಾಣಿಸಿದೆಯಷ್ಟೆ. ಅದೇ ಶ್ರೀನಿವಾಸಾಚಾರ್ಯರು ಕಂಚಿಗೆ ಹಿಂತಿರುಗಿ ಬಂದಮೇಲೆ ತ್ರಿಯಂಬಕಶಾಸ್ತ್ರಿಗಳಿಗೂ ತಮಗೂ ಮೈಸೂರ ಅರಮನೆಯಲ್ಲಿ ರಾಜಸಭೆಯಲ್ಲಿ ವಾಕ್ಯಾರ್ಥ ಜರಗಿತು; ಹನ್ನೊಂದು ಕೋಟಿಗಳು ನಡೆದವು; ಹನ್ನೊಂದನೇ ಕೋಟಿ ತಮ್ಮದು; ಅದಕ್ಕೆ ತ್ರಿಯಂಬಕಶಾಸ್ತ್ರಿಗಳಿಂದ ಉತ್ತರ ಬರಲಿಲ್ಲ; ಆಗ ಸಭೆ ಮುಗಿಯಿತು ಹೀಗೆಂದು ಶ್ರೀನಿವಾಸಾಚಾರ್ಯರು ತಾವೇ ಹನ್ನೊಂದು ಕೋಟಿಗಳನ್ನು ಕಲ್ಪಿಸಿ ಬರೆದು ತಮ್ಮ ಕೂಟದಲ್ಲಿ ಪ್ರಚುರಪಡಿಸಿದ್ದರು. ಇಂಥಾ ಪತ್ರಿಕೆಯೊಂದು ಕಂಚಿಯಲ್ಲಿ ರಾಮಶಾಸ್ತ್ರಿಗಳ ದೃಷ್ಟಿಗೆ ಬಿತ್ತು. ಆಗ ಶಾಸ್ತ್ರಿಗಳು ಕಣ್ಣಾರ ತಾವು ರಾಜಸಭೆಯಲ್ಲಿ ನೋಡಿದ ಸಂಗತಿಗಳನ್ನು ಬರೆದು, ಶ್ರೀನಿವಾಸಾಚಾರ್ಯರು

ರೆದುಕೊಂಡಿದ್ದ ಹನ್ನೊಂದು ಕೋಟಿಗೂ ಖಂಡನರೂಪ
ವಾಗಿ ಒಂದು ಗ್ರಂಥವನ್ನು ಬರೆದು ಹೊರಪಡಿಸಿದರು.
ಆ ಗ್ರಂಥದಲ್ಲಿ ಅವರು ಬರೆದಿರುದ ಎರಡು ಶ್ಲೋಕಗಳನ್ನು
ಕೆಳಗೆ ವಿವರಿಸಿದೆ —

ಶ್ಲೋಕ|| ದ್ವೈತವಾದಿ ಮತಧ್ವಾಂತ ವಿಧ್ವಂಸನ ವಿಚಕ್ಷಣಂ|
ವಂದೇ ತ್ರ್ಯಂಬಕ ಮಾರ್ತಾಂಡಂ ಸರ್ವ ಶಾಸ್ತ್ರಾ
ಬ್ಜ ಬೋಧಕಂ||

ಅರ್ಥ|| ದ್ವೈತವಾದಿ ಮತವೆಂಬ ಅಂಧಕಾರವನ್ನು ಹೋಗ
ಲಾಡಿಸುವುದರಲ್ಲಿ ಸಮರ್ಥರಾಗಿಯೂ ಸರ್ವ ಶಾಸ್ತ್ರ
ವೆಂಬ ಕಮಲವನ್ನು ತೋರ್ಪಡಿಸತಕ್ಕದ್ದಾಗಿಯೂ
ಇರುವ ತ್ರ್ಯಂಬಕನೆಂಬ ಸೂರ್ಯನನ್ನು ನಮಸ್ಕ
ರಿಸುತೇನೆ.

ಶ್ಲೋಕ|| ಭಟ್ಟ ತ್ರ್ಯಂಬಕಶಿಷ್ಯೇಣ ರಾಮೇಣ ತದನುಗ್ರ
ಹಾತ್| ಶ್ರೀನಿವಾಸಕೃತಿಸ್ಸ್ವೀಯೋತ್ಪ್ರೇಕ್ಷಾ ಮೂ
ಲಾ ನಿರಾಕೃತಾ||

ಅರ್ಥ|| ಸ್ವಂತ ಉತ್ಪ್ರೇಕ್ಷೆಯೇ ಮೂಲವಾಗಿವುಳ್ಳ ಶ್ರೀನಿ
ವಾಸಾಚಾರ್ಯರ ಕೃತಿಯು ಭಟ್ಟತ್ರ್ಯಂಬಕರ ಶಿ
ಷ್ಯನಾದ ರಾಮನಿಂದ ನಿರಾಕರಿಸಲ್ಪಟ್ಟಿತು.

ಹೀಗೆ ರಾಮಶಾಸ್ತ್ರಿಗಳು ಮಾಡಿದಕಾರಣ ಶ್ರೀನಿವಾ

ಸಾಚಾರ್ಯರಿಗೆ ಅಪಮಾನವಾಯಿತು. ಶ್ರೀವೈಷ್ಣವರು ಸ್ಪರ್ಧೆಯಿಂದ ವಾದಕ್ಕೆ ಸಿದ್ಧಮಾಡಿಕೊಳ್ಳಲು ಇದೂ ಒಂದು ಕಾರಣವಾಯಿತು. ತ್ರಿಯಂಬಕಶಾಸ್ತ್ರಿಗಳಲ್ಲಿ ರಾಮಶಾಸ್ತ್ರಿಗಳಿಗೆ ವಿಶೇಷವಾದ ಭಕ್ತಿ ಇತ್ತೆಂಬುವುದಕ್ಕೆ ಇದೂ ಒಂದು ದೃಷ್ಟಾಂತವಾಗಿದೆ.

ಇಲ್ಲಿ ಸೂಚಿಸಲು ಅರ್ಹವಾದ ಮತ್ತೊಂದು ಸಂಗತಿ ಇದೆ. ಆ ಪ್ರಾಂತ್ಯದಲ್ಲಿ ವಿಗ್ರಹದೇಶಿಕಾಚಾರ್ಯರೆಂಬ ಮತ್ತೊಬ್ಬ ಶ್ರೀವೈಷ್ಣವ ಪಂಡಿತರು ರಾಮಶಾಸ್ತ್ರಿಗಳ ಸ್ಥಿತಿಯನ್ನು ನೋಡಿ ಸಹಿಸಲಾರದೆ—ಈತನಿಗೆ ಛತ್ರ ಚಾಮರ ಯಾತಕ್ಕೆ? ಇದನ್ನು ಯಾರು ಕೊಟ್ಟರು? ಏನ ನೋಡಿ ಕೊಟ್ಟ? ಎಂದು ಮೂದಲಿಸಿ ತಿರಸ್ಕಾರ ಮಾಡಿ ಆಕ್ಷೇಪಣೆ ಮಾಡಿದ್ದರಂತೆ. ಇದು ಶಾಸ್ತ್ರಿಗಳ ಕಿವಿಗೆ ಬಿತ್ತು. ಸಮಯ ಬರಲೆಂದು ಸುಮ್ಮನೆ ಇದ್ದರು.

ಮೊದಲೇ ಗೊತ್ತಾಗಿದ್ದಪ್ರಕಾರ ಕಂಚೀ ದೇವಸ್ಥಾನದಲ್ಲಿ ವಾಕ್ಯಾರ್ಥಕ್ಕೆ ಏರ್ಪಾಡಾಯಿತು. ಅನೇಕ ಜನ ಶ್ರೀವೈಷ್ಣವರೂ ವೈಷ್ಣವರೂ ಪ್ರತಿಕಕ್ಷಿಯಾಗಿ ಬಂದು ನೆರೆದರು. ಶಾಸ್ತ್ರಿಗಳು ತಮ್ಮ ಶಿಷ್ಯರೊಡಗೂಡಿ ಸಭೆಗೆ ಹೋಗಿ ಕೂತುಕೊಂಡರು. ವಾದಪ್ರತಿವಾದಕ್ಕೆ ಆರಂಭವಾಯಿತು. ಈ ಸಂಭ್ರಮವನ್ನು ನೋಡಲು ಬ್ರಾಹ್ಮಣರೂ ಬ್ರಾ

ಹ್ಮಣೇತರರರೂ ಸೇರಿ ಹತ್ತುಸಾವಿರ ಜನದವರೆಗೂ ನೆರೆದಿತ್ತು. ಶಾಸ್ತ್ರಿಗಳ ವಾದವು ಅರ್ಥವಾಗದೆ ಇದ್ದವರಿಗೂ ಕೂಡ ಅವರ ವಾಗ್ಧೋರಣೆಯ ವಿಜೃಂಭಣೆಯು ಎಷ್ಟೋ ಶ್ರಾವ್ಯವಾಗಿತ್ತು. ಪ್ರತಿಕಕ್ಷಿಯವರಮೇಲೆ ಶಾಸ್ತ್ರಿಗಳು ಕೋಟಿಗಳನ್ನು ಏರಿಸುತಾ ಕೊನೆಗೆ ಮಧುಸೂದನ ಸರಸ್ವತಿ ಎಂಬ ಪಂಡಿತನು ಅದ್ವೈತಸಿದ್ಧಿ ಎಂಬ ಗ್ರಂಥದಲ್ಲಿ ಸ್ಥಾಪಿಸಿರುವಮೇರಗೆ ಜನನ್ಮಿಥ್ಯಾತ್ವವನ್ನು ಸ್ಥಾಪನೆಮಾಡಿದರು. ಇವರಮೇಲೆ ಯಾವ ವಾದವೂ ಕೋಟಿಯೂ ಹತ್ತಲಿಲ್ಲ. ಆ ಕಾಲದಲ್ಲಿ ವಿಗ್ರಹದೇಶಿಕಾಚಾರ್ಯರು ಮೂದಲಿಸಿ ಆಡಿದ್ದ ಮಾತನ್ನು ನೆನಿಸಿಕೊಂಡು ರಾಮಶಾಸ್ತ್ರಿಗಳು ಸಭೆಯಲ್ಲಿ—"ಏನನ್ನು ನೋಡಿ ಛತ್ರ ಚಾಮರಗಳನ್ನು ಕೊಟ್ಟ ಕೊಟ್ಟ?" ಎಂದು ಆಕ್ಷೇಪಣೇ ಮಾಡಿ ವಿಗ್ರಹದೇಶಿಕಾಚಾರ್ಯರು ಮಾತನಾಡಿದರಂತೆ, "ಇದನ್ನು ನೋಡಿ ಕೊಟ್ಟನ್ಯೆ, ಇದನ್ನು ನೋಡಿ ಕೊಟ್ಟ" ಎಂದು ರಾಮಶಾಸ್ತ್ರಿಗಳು ತಮ್ಮ ಎದೆಯನ್ನು ಬಲದಕೈಯಲ್ಲಿ ತಟ್ಟಕೊಳ್ಳುತಾ ಹೇಳಿದರು. ಎಲ್ಲರ ನಾಲಗೆಯೂ ಕಟ್ಟಹೋಯಿತು. ಶಾಸ್ತ್ರಿಗಳ ಮಹಾ ಪಾಂಡಿತ್ಯಕ್ಕೆ ಎಲ್ಲರೂ ಸಂತೋಷಪಟ್ಟರು. ಇದು ಪರಾಭವ ಸಂವತ್ಸರದಲ್ಲಿ ನಡೆಯಿತು. ಹೀಗೆ ಮೂರು ವರುಷಕ್ಕೆ ಮೇಲ್ಪಟ್ಟು ದಕ್ಷಿಣದೇಶದಲ್ಲಿ

ಸಂಚಾರ ಮಾಡಿಕೊಂಡು ರಾಮಶಾಸ್ತ್ರಿಗಳು ಮೈಸೂರಿಗೆ ಹಿಂತಿರುಗಿ ಶಿಷ್ಯವರ್ಗಸಹಿತ ಬಂದು ಸೇರಿದರು. ಆ ಕಾಲ ದಲ್ಲಿಯೇ ಕಂಚಿಯಲ್ಲಿ ಆ ಊರಜನರ ಇಷ್ಟಪ್ರಕಾರ ರಾಮಶಾಸ್ತ್ರಿಗಳು ಸಂಸ್ಕೃತ ಪಾಠಶಾಲೆಯನ್ನು ಏರ್ಪಡಿಸಿ ಅದಕ್ಕೆ ತಮ್ಮ ಪ್ರಿಯಶಿಷ್ಯರಾದ ವಿಜಯರಾಘವಾಚಾರ್ಯರನ್ನು ಅಧ್ಯಕ್ಷರಾಗಿ ಇಟ್ಟರು.

ತರುವಾಯ ಶತಕೋಟಿ ಎಂಬ ತರ್ಕಗ್ರಂಥವನ್ನು ರಾಮಶಾಸ್ತ್ರಿಗಳು ಬರೆದರು. ಇದರಿಂದ ಈಚೆಗ ಇವರಿಗೆ ಶತಕೋಟಿ ರಾಮಶಾಸ್ತ್ರಿ ಎಂದು ಹೆಸರಾಯಿತು.

ದಕ್ಷಿಣದೇಶದಲ್ಲಿ ಸಂಚಾರ ಮಾಡುತಿರುವಾಗಲೇ ಪ ರಾಭವ ಸಂವತ್ಸರದ ವೈಶಾಖ ಮಾಸದಲ್ಲಿ ಕಾಂಚೀಪುರ ದಲ್ಲಿ ಯಜ್ಞನಾರಾಯಣನೆಂಬ ಗಂಡುಮಗು ಹುಟ್ಟಿ ಶಾಸ್ತ್ರಿ ಗಳಿಗೆ ಪುನಃ ಪುತ್ರೋತ್ಸವವಾಯಿತು. ಈ ಯಜ್ಞನಾರಾ ಯಣನು ಬಹು ಬುದ್ಧಿಶಾಲಿಯಾಗಿಯೂ ಸರಸಿಯಾಗಿಯೂ ಇದ್ದನು. ವೇದ, ಕಾವ್ಯ, ನ್ಯಾಯಶಾಸ್ತ್ರ ಇವುಗಳಲ್ಲಿ ಈ ತನಿಗೆ ವಿಶೇಷವಾಗಿ ಪರಿಶ್ರಮವುಂಟಾಯಿತು.



# ೮ನೇ ಅಧ್ಯಾಯ

## ಮೈಸೂರಲ್ಲಿ ತಿಮ್ಮಣ್ಣಶಾಸ್ತ್ರಿಗಳ ಮಂತ್ರಿತ್ವ— ರಾಮಶಾಸ್ತ್ರಿಗಳ ಪಾಂಡಿತ್ಯ

ಮೈಸೂರ ದೊರೆಗಳಾದ ಕೃಷ್ಣರಾಜ ಒಡೆಯರಿಗೆ ದೌಲತ್ತು ಹೋದ್ದೂ, ಅವರಿಗೆ ಖರ್ಚಿಗಾಗಿ ತಿಂಗಳು ೧ಕ್ಕೆ ೩೫,೦೦೦ ಚಿಲ್ಲರೆ ರೂಪಾಯಿಯನ್ನು ಕೊಡುತಾ ಕಂಪನಿ ಸರ್ಕಾರದವರು ರಾಜ್ಯದ ಆಡಳತಕ್ಕಾಗಿ ಕಮಿಷನರನ್ನು ನೇಮಿಸಿದ್ದೂ ಸಹ ಹಿಂದೆ ಕಾಣಿಸಿದೆ. ಇಂಗ್ರೀಜಿ ವೆಂಕಟಪ್ಪಾಜಿಗೆ ಮಧ್ಯಕಾಲದಲ್ಲಿ ಯಾವುದೋ ಒಂದು ನೆಪದಮೇಲೆ ಸೆರೆಯಾದ್ದೂ ಸಹಾ ಗೊತ್ತಾಗಿದೆ. ಈ ವೆಂಕಟಪ್ಪಾಜಿಯಲ್ಲಿ ಓಡಾಡಿಕೊಂಡು ರಹಸ್ಯವಾದ ಮಂತ್ರಾಲೋಚನೆಯನ್ನು ತಿಳಿದುಕೊಂಡಿದ್ದ ಮುಲಕನಾಟು ಸ್ಮಾರ್ತಬ್ರಾಹ್ಮಣ ತಿಮ್ಮಣ್ಣಶಾಸ್ತ್ರಿ ಎಂಬ ವೈದಿಕನು ದೊರೆಯಬಳಿ ಸ್ಥಳವನ್ನು ಸಂಪಾದಿಸಿಕೊಂಡು ಪ್ರಾಮುಖ್ಯತೆಗೆ ಬಂದನು. ದೊರೆಗಳು ವೆಚ್ಚಕ್ಕೆ ಸಾಲದೆ ಹೆಚ್ಚಾಗಿ ಸಾಲಮಾಡುತಾ ಬಂದರು. ಈ ಸಾಲವು ಅಧಿಕವಾಗುತಾ ಬಂತು. ತಿಮ್ಮಣ್ಣಶಾಸ್ತ್ರಿಯು ಇಂಗ್ಲಿಷ್ ಸರದಾರರ ಸಹಾಯವನ್ನು ಪಡೆದು ಶಕ್ತರಾದ ಅವರ ಮೂಲಕ ರಾಜರಿಗೂ ಕಲ್ಕತ್ತಾ ಸರ್ಕಾರಕ್ಕೂ ಕರೀತಗಳನ್ನು ನಡಿಸುತಾ ರಾಜಕೀಯ

ವ್ಯಾಪಾರದಲ್ಲಿ ಹೆಚ್ಚಾದ ಶ್ರದ್ಧೆಯನ್ನು ವಹಿಸಿದನು. ಆಚಾತುರ್ಯದಿಂದ ಕಂಪನಿಸರ್ಕಾರದವರ ವಶವಾದ ದೌಲತ್ತನ್ನು ಹೇಗಾದರೂ ಪುನಃ ಪಡೆದು ಕ್ರಮವಾಗಿ ರಾಜ್ಯಭಾರವನ್ನು ಮಾಡಿ ಇತರರಲ್ಲಿ ಸರಿ ಎನ್ನಿಸಿಕೊಳ್ಳಬೇಕೆಂಬ ನ್ಯಾಯವಾದ ಆಶೆಯು ಕೃಷ್ಣರಾಜ ಒಡೆಯರವರಿಗೆ ಹೆಚ್ಚಾಗಿತ್ತು. ಈ ಸಂಗತಿಯೇ ಅವರಮನಸ್ಸಿಗೆ ಅಂಟ ಕುಟ್ಟೇ ಹುಳುವಿನಹಾಗೆ ಒಳಗೇ ಕೊರೆಯುತಾ ಇತ್ತು.

ಆ ಕಾಲದಲ್ಲಿ ಕಂಪನಿಯವರಿಗೆ ಹಿಂದುಸ್ಥಾನದ ಅನೇಕ ಪ್ರಾಂತ್ಯಗಳು ಸೇರಿದ್ದಾಗ್ಯೂ ಇವರ ಸಾರ್ವಭೌಮತ್ವವು ಇನ್ನೂ ಚೆನ್ನಾಗಿ ಬೇರನ್ನು ಬಿಟ್ಟಿರಲಿಲ್ಲ. ಸಿಂಧ್ಯನ ರಾಜ್ಯದ ಮರಾಟೆಯವರಿಗೂ ಇಂಗ್ಲಿಷರಿಗೂ ಕೈಕೈಸೇರುವ ಭೀತಿಯೂ ನೆಲೆಗೊಳ್ಳುತಾಯಿತ್ತು. ಪಂಜಾಬು ದೇಶದ ರಣಜಿತಸಿಂಗು ತೀರಿಹೋಗಿ ಆ ದೇಶದಲ್ಲಿ ಪ್ರಭುತ್ವ ಬದಲಾಯಿಸಿತು. ಆ ಹೊಸ ಆಡಳತದಿಂದ ಸಿಕ್ಕರಸೇನೆಯು ಕಟ್ಟುವಿಾರಿತ್ತು. ಇವರು ಪರಾಕ್ರಮಶಾಲಿಗಳಾದ್ದರಿಂದ ಯಾವಾಗ ಕಂಪನಿಯವರಿಗೆ ಸೇರಿದ ರಾಜ್ಯದಮೇಲೆ ಬಿದ್ದಾರೋ ಯಾವಕಾಲದಲ್ಲಿ ಏನು ತೊಂದರೆ ಬಂದೀತೋ ಎಂದು ಇಂಗ್ಲಿಷರು ಜಾಗರೂಕರಾಗಿಯೇ ಇರುತಿದ್ದರು. ಸಿಂಧ್ಯ ಮಹಾರಾಜನ ಸೇನೆಯೂ ರಣಜಿತಸಿಂಗನ ಸೇನೆಯೂ ಫ್ರೆಂಚು ಸೇನಾಪತಿಗಳಿಂದ

ತಯಾರಾಗಿದ್ದ ಕಾರಣ, ಕಂಪನೀಸೇನೆಯೊಡನೆ ಸಮಸಮ ನಾಗಿ ಯುದ್ಧಕ್ಕೆ ನಿಲ್ಲುವ ಈ ಶತ್ರುಗಳನ್ನು ಜೈಸುವುದು ಜಯಲಕ್ಷ್ಮಿಯ ಕಡೆಗಂಣನೋಟ ಹೇಗೆ ತಿರುಗುವುದೋ ಅದರಿಂದ ಗೊತ್ತಾಗಬೇಕಾಗಿತ್ತೇ ಅಲ್ಲದೆ, ಪುರುಷ ಪ್ರಯ ತ್ನದಲ್ಲಿ ಚಿಂತೆಯುಂಟಾಗುವುದಕ್ಕೆ ಕಾರಣಸಾಕಾಗಿತ್ತು.

ಈ ಸಂದರ್ಭದಲ್ಲಿ ತೆಪ್ಪಗೆ ಇರುವ ದಕ್ಷಿಣ ದೇಶವನ್ನು ಗಡಬಿಡಿ ಏನೂ ಇಲ್ಲದೆ ತಮಗೆ ಅನುಕೂಲವಾಗಿರುವಹಾಗೆ ಇಟ್ಟುಕೊಂಡಿರಬೇಕಾದ್ದು ಕಂಪನಿಯವರಿಗೆ ಅಗತ್ಯವಾ ಗಿತ್ತು. ಇದರಂತೆ ದೊಡ್ಡದಾಗಿಯೂ ಹೆಸರ ಪಡೆದದ್ದಾಗಿ ಯೂ ಇರುವ ಮೈಸೂರ ಸಂಸ್ಥಾನವನ್ನು ತಮ್ಮಂತೆ ಇಟ್ಟು ಕೊಳ್ಳುವುದಕ್ಕೂ, ಗುಣಾಢ್ಯರಾದ ಕೃಷ್ಣರಾಜ ಒಡೆಯ ರವರಲ್ಲಿ ಹಿಂದುಸ್ಥಾನದ ಎಲ್ಲಾ ಜನಕ್ಕೂ ರಾಜವಾಡೆಯ ವರಿಗೂ ಅನುತಾಪ ವಿದ್ದದರಿಂದ, ಅಂಥಾ ದೊರೆಗೆ ಏನೋ ಒಂದು ಉಪಕಾರ ಮಾಡಿದೆವೆಂದು ಹೆಸರ ಮಾಡಿಕೊಳ್ಳು ವುದಕ್ಕೂ, ಕಲ್‌ಕತ್ತಾಸರ್ಕಾರದವರಿಗೆ ಆಶೆ ಇರತಕ್ಕದ್ದು ಸಹಜವಲ್ಲವೆ? ಇದು ನೆರವೇರಲು ಕೃಷ್ಣರಾಜ ಒಡೆಯ ರವರು ನಡಿಸುತಾ ಇದ್ದ ಪತ್ರಿಕಾಪ್ರಸಂಗವು ಸಮಯವನ್ನು ದೊರಕಿಸಿಕೊಟ್ಟಿತು. ಕೃಷ್ಣರಾಜ ಒಡೆಯರವರ ಇಷ್ಟ ವಿದ್ದಂತೆ ರಾಜ್ಯದ ಹುಟ್ಟುವಳಿಯಲ್ಲಿ ಪಂಚಮಾಂಶವನ್ನು

ಇವರ ಪೇಕ್ಷಕ್ಕಾಗಿ ಕೊಡಲು ಕಲ್ಕತ್ತಾ ಸರ್ಕಾರದವರು ಇಷ್ಟಪಟ್ಟರು.

ರಾಜ್ಯವು ಬಾರದೆ ಹೋದಾಗ್ಯೂ ತಕ್ಕಮಟ್ಟಿಗೆ ವ್ಯಯಕ್ಕೆ ಹಣಬರುವಂತೆ ಅನುಕೂಲವಾದ್ದು ತಿಮ್ಮಂಣಶಾಸ್ತ್ರಿಗಳ ಪ್ರಯತ್ನದಿಂದ ಎಂದು ಜನಜನಿತವಾಯಿತು. ಇಷ್ಟಕ್ಕೇ ಬಿಡದೆ ದೌಲತ್ತನ್ನು ಬರಮಾಡಿಕೊಳ್ಳಲು ಮುಂದಕ್ಕೂ ದೊಡ್ಡದಾದ ಪ್ರಯತ್ನ ಜರಗುತ್ತಲೇ ಇತ್ತು. ಮೈಸೂರ ಅರಮನೆಯಲ್ಲಿ ಖರ್ಚು ಹೆಚ್ಚಾಗಿದೆ ಎಂದು ಯೋಚಿಸಿ ತಿಮ್ಮಂಣಶಾಸ್ತ್ರಿಗಳು ಚಾಕರರ ಸಂಬಳವನ್ನು ಯೋಗ್ಯತಾನುಸಾರ ಕಡಮೆಮಾಡಿದರು. ದೊರೆಗಳು ಅರಮನೇ ಖರ್ಚಿಗಾಗಿ ಅನೇಕ ಗೋಸಾಯಿಗಳಲ್ಲಿ ಗುಜರಾತಿ ಸಾಹುಕಾರರು ಮೊದಲಾದವರಲ್ಲಿ ಮಾಡಿದ್ದ ಸಾಲವನ್ನು ತೀರಿಸಲು ತಕ್ಕ ಏರ್ಪಾಡೂ ಆಯಿತು. ಈ ಪ್ರಕಾರ ನಾನಾ ರೀತಿಯಲ್ಲಿ ತಮಗೆ ಅನುಕೂಲವಾಗುವಹಾಗೆ ಕಾರ್ಯನಿರ್ವಾಹವನ್ನು ಮಾಡಿದ ತಿಮ್ಮಂಣಶಾಸ್ತ್ರಿಯಲ್ಲಿ ದೊರೆಗೆ ಹೆಚ್ಚಾದ ಅಭಿಮಾನವಿತ್ತು. ಕಾಡು ಮೃಗಗಳಿಗೆ ಕೋಡು ಮೃಗಗಳ ಉತ್ತಮಗುಣವೂ, ಕೋಡು ಮೃಗಗಳಿಗೆ ಮನುಷ್ಯನ ಉತ್ತಮ ಗುಣವೂ, ಮನುಷ್ಯನಿಗೆ ದೇವತೆಗಳ ಉತ್ತಮ ಗುಣವೂ ಬರುವುದು ಸಹಜವಾದ ವ್ಯಾಪಾರವಲ್ಲ. ಆದ್ದರಿಂದ

ತಿಮ್ಮಣ್ಣಶಾಸ್ತ್ರಿಗಳಿಗೆ ಅಧಿಕಾರವುದವು ತಲೆಗೇರಿ ಅಹಂಕಾರವನ್ನು ಹುಟ್ಟಿಸಿ ಹೊರಕಣ್ಣನ್ನೂ ಒಳಕಣ್ಣನ್ನೂ ಅರೆಯರೆಯಾಗಿ ಮುಚ್ಚಿಬಿಡುವಂತೆ ಮಾಡಿತು. ಅನೇಕ ಲೌಕಿಕರಾದ ದೊಡ್ಡ ಅಧಿಕಾರಿಗಳು ಸಹಿತ ತಿಮ್ಮಣ್ಣಶಾಸ್ತ್ರಿಗಳ ಹಸಾದಕ್ಕೆಹಮ್ಮೈಸಿಕೊಂಡು ನಡೆಯುತಾ ಇರುವಾಗ್ಗೆ, ವೈದಿಕರನ್ನು ಕಂಡರೆ ಇವರಿಗೆ ಲಕ್ಷ್ಯವಿದ್ದೀತೆ? ಎಂದಿಗೂ ಇರಲಾರದು.

ಆದರೆ ಲೌಕಿಕ ಮಾರ್ಗದಲ್ಲಿ ತಿಮ್ಮಣ್ಣಶಾಸ್ತ್ರಿಗಳು ಉಂಟುಮಾಡಿಕೊಡುತಾ ಇದ್ದ ಆದಾಯವನ್ನೂ, ವೈದಿಕ ಮಾರ್ಗದಲ್ಲಿ ಪಾಂಡಿತ್ಯವನ್ನು ತೋರಿಸಿ ಇದಕ್ಕೆಲ್ಲಾ ಆಧಾರ ಭೂತನಾಗಿದ್ದ ರಾಜನ ಹೆಸರನ್ನೂ ಖ್ಯಾತಿಯನ್ನೂ ಲೋಕಕ್ಕೆಲ್ಲಾ ಹರಡುತಾ ರಾಮಶಾಸ್ತ್ರಿಗಳು ಮಾಡುತಾ ಇದ್ದ ಉಪಕಾರವನ್ನೂ ಹೋಲಿಸುವುದು ಸಾಧ್ಯವಲ್ಲ. ಮೊದಲನೇ ಉಪಕಾರವು ತಾತ್ಕಾಲಿಕವಾದ್ದು, ಎರಡನೇದು ಸ್ಥಿರವಾದ್ದು. ಇದನ್ನು ಬಲ್ಲವರಾಗಿ ಪಾಂಡಿತ್ಯಕ್ಕೆ ಮಹಾಗಜವಾದ ರಾಮಶಾಸ್ತ್ರಿಗಳು ಇತರ ಅಯೋಗ್ಯರಹಾಗೆ ಮಂತ್ರಿಯನ್ನು ವಿಶೇಷವಾಗಿ ಉಪಸರ್ಪಿಸುತಾ ಇರಲಿಲ್ಲ. ಇದನ್ನು ತಿಮ್ಮಣ್ಣಶಾಸ್ತ್ರಿಯು ಮನಸ್ಸಿನಲ್ಲಿಟ್ಟುಕೊಂಡು ಸಮಯವನ್ನು ಸಾಧಿಸುತಲೇ ಇದ್ದನು.

ರಾಮಶಾಸ್ತ್ರಿಗಳೂ ತಿಮ್ಮಂಣಶಾಸ್ತ್ರಿಗಳೂ ಇಬ್ಬರೂ ಮುಲಕನಾಟು ಪಂಗಡಕ್ಕೆ ಸೇರಿದ ಆಂಧ್ರಬ್ರಾಹ್ಮಣರಾಗಿದ್ದರು. ಜನರಿಗೆ ನಂಟರಾದವರಲ್ಲಿ ಹೊಕ್ಕು ಹೊರಟು ವಾಡಿಕೆಯಾಗಿ ಊಟವುಪಚಾರಗಳಲ್ಲಿ ಹೆಚ್ಚಿನ ಬಳಕೆ ಇರುವದು ಸಹಜವಷ್ಟೆ. ಇದರಲ್ಲಿಯೂ ನಿಷ್ಟರಾದವರಲ್ಲಿ ಇಂಥಾ ಬಳಕೆಯು ಶ್ರೇಯಸ್ಕರವೆಂದು ಅನೇಕರು ತಿಳಿದುಕೊಂಡಿರುತಾರೆ. ರಾಮಶಾಸ್ತ್ರಿಗಳು ನಿಷ್ಟರಾಗಿಯೂ ದೊಡ್ಡ ಪಂಡಿತರಾಗಿಯೂ ಇದ್ದರು. ಮೈಸೂರೂ ಬೆಂಗಳೂರೂ ಅಲ್ಲದೆ ಇತರ ಸ್ಥಳಗಳಲ್ಲಿದ್ದ ಮೇಲ್‌ತರದವರೂ ರಾಮಶಾಸ್ತ್ರಿಗಳ ಮನೆಯಲ್ಲಿ ತಮಗ ಒಂದು ಹೊತ್ತು ಭೋಜನದೊರೆತರೆ ತಾವು ಕೃತಾರ್ಥರಾದೆವೆಂದು ತಿಳಿದಿದ್ದರು. ಶುದ್ಧರಾಗಿಯೂ ಸಚ್ಚರಿತ್ರರಾಗಿಯೂ ಇರುವವರು ನ್ಯಾಯವಾದ ಮಾರ್ಗದಿಂದ ಸಂಪಾದಿಸಿ ಸದ್ವ್ಯಯಮಾಡುವಾಗ, ಅಂಥವರ ಮನೇ ಅನ್ನವು ದೇಹವನ್ನೂ ಮನಸ್ಸನ್ನೂ ಶುದ್ಧಿಮಾಡುತ್ತೆ ಎನ್ನುವುದಕ್ಕೆ ಸಂದೇಹವಿಲ್ಲ. ಹೀಗಿದ್ದಾಗ್ಗೂ ತಿಮ್ಮಂಣಶಾಸ್ತ್ರಿಯು ರಾಮಶಾಸ್ತ್ರಿಗಳ ಮನೆಗೆ ಊಟಕ್ಕೆ ಹೋಗಲು ಹಿಂತೆಗೆಯುತಾ, ಸ್ಥಾನಬಲದಮೇಲೆ ಹುಟ್ಟಿದ ಅಧಿಕಾರದ ಬಿಂಕವನ್ನು ಪ್ರಸರಿಸಲು ಆರಂಭಿಸಿದಹಾಗೆ ಕಂಡು ಬರುತ್ತೆ. ಇದೂ ಅಲ್ಲದೆ ಔಪಾಸನ ವೈಶ್ವದೇವಾದಿ ಕರ್ಮಗಳನ್ನು ಮಾಡಿ

ಕೊಂಡು ನಿಷ್ಠರಾಗಿರತಕ್ಕವರ ಮನೆಗೆ ರಾಮಶಾಸ್ತ್ರಿಗಳು ಭೋಜನಕ್ಕೆ ಹೋಗುತಿದ್ದರಲ್ಲದೆ ಉಳಿದ ಯಾವ ಕಡೆಗೂ ಹೊಗುತಿರಲಿಲ್ಲ. ತಿಮ್ಮಣ್ಣಶಾಸ್ತ್ರಿಗಳಲ್ಲಿ ತಮಗೆ ಹೆಚ್ಚಿನ ಪ್ರತ್ಯಯ ಇರಲಿಲ್ಲವಾದಕಾರಣ, ಅವರ ಮನೆಗೆ ರಾಮಶಾಸ್ತ್ರಿಗಳು ಭೊಜನಕ್ಕೆ ಹೋಗುತಾ ಇರಲಿಲ್ಲ. ಇದು ಪರಸ್ಪರ ಒಂದು ಬಗೆಯಾದ ತಿರಸ್ಕಾರ ಭಾವವೆಂದು ಯಾರು ತಾನೆ ತಿಳಿಯಲಾರರು? ತಥಾಪಿ ಬಂಧು ವರ್ಗದಲ್ಲಿ ಇಂಥಾ ಭಾವನೆಯು ಪ್ರತಿಷ್ಟೆಗೆ ಕೇವಲ ಕುಂದಕವನ್ನು ಉಂಟುಮಾಡುವುದಾಗಿ ಅನೇಕರು ಭಾವಿಸುತಾರೆ. ಈ ಸಂಬಂಧದ ಕಲ್ಮಷವು ಉಭಯರ ಮನಸ್ಸಿನಲ್ಲಿಯೂ ಅಂಟಿಯೇ ಇತ್ತು.

ಹೀಗಿರುವಾಗ ದೊರೆಯ ಜಾತಕಕ್ಕೆ ಯಾವುದೊ ಗ್ರಹಚಾರವು ಕ್ರೂರವಾಗಿದ್ದಕಾರಣ ಲಕ್ಷತಿಲ ಹೋಮವನ್ನು ಮಾಡಿ ಶಾಂತಿಮಾಡಿದರೆ ಉತ್ತಮವೆಂದು ಪಂಡಿತರು ನಿಷ್ಕರ್ಷೆಮಾಡಿದರು. ಆ ಪ್ರಕಾರ ಅರಮನೆಯಲ್ಲಿ ಆ ಹೋಮಕ್ಕೆ ತಕ್ಕ ಏರ್ಪಾಡಾಯಿತು. ತಾರಾಬಲ ಮೊದಲಾದ್ದನ್ನು ನೋಡಿ ಜೊಯಿಸರು ತಿಥಿಯನ್ನು ಗೊತ್ತುಮಾಡಿದರು. ಗೊತ್ತಾದ ಒಂದು ಕಾಲದಲ್ಲಿ ಲಕ್ಷಸಾರಿ ಎಳ್ಳನ್ನು ಅಗ್ನಿಗೆ ಆಹುತಿಕೊಟ್ಟು ಹೋಮಮಾಡುವುದೇ ಈ ಶಾಂತಿಗೆ

ಮುಖ್ಯವಾದ ವಿಧಾನ. ಗೊತ್ತಾದ ದಿವಸ ಪ್ರಾತಃಕಾಲದಲ್ಲಿ ಸೂರ್ಯೋದಯವಾದ ಸ್ವಲ್ಪಹೊತ್ತಿಗೆ ಹೋಮವನ್ನು ಆರಂಭಮಾಡಿ ಕೂಡಿದಮಟ್ಟಿಗೂ ಜಾಗ್ರತೆಯಾಗಿ ಮುಗಿಸಬೇಕಾದ್ದು ಅತ್ಯವಶ್ಯಕವಾಗಿತ್ತು. ಇದು ಪೂರೈಸುವವರೆಗೂ ಮುಖ್ಯ ಕರ್ತನಾದ ದೊರೆಗೆ ಭೋಜನ ಕೂಡದೆಂದು ವಿಧಾಯಕವಾಗಿತ್ತು. ಅಂಥಾ ಪೇಚ್ಚು ಗಟ್ಟಲೆ ದಿವಸಗಳಲ್ಲಿ ಅರಮನೇ ವೈದಿಕ ಮಂಡಲಿಯಲ್ಲಾ ಜಾಗ್ರತೆಯಾಗಿ ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ಅರಮನೆಗೆ ಬಂದು ಅಲ್ಲಿ ಜರಗಬೇಕಾದ ಕೆಲಸಗಳೆನ್ನೆಲ್ಲಾ ಆಗಮಾಡಿಸತಕ್ಕ ಆಚರಣೆ ಈಗಲೂ ಅರಮನೆಯಲ್ಲಿ ನಡೆಯುತಾ ಇದೆ. ಈ ಪ್ರಕಾರ ರಾಮಶಾಸ್ತ್ರಿಗಳು ಸ್ನಾನಾದಿಗಳನ್ನು ತೀರಿಸಿಕೊಂಡು ಸೂರ್ಯೋದಯವಾದ ೩-೪ ಗಳಿಗೆಯೊಳಗಾಗಿ ಅರಮನೆಗೆ ಹೋದರು. ಇವರು ಅರಮನೆಗೆ ಹೋಗುವುದರೊಳಗಾಗಿಯೇ ಹವನಕ್ಕೆ ಮೊದಲಾಗಿತ್ತು. ಅಗ್ನಿಕುಂಡದ ಸುತ್ತಲೂ ಹತ್ತುಜನ ಬ್ರಾಹ್ಮಣರು ಕೂತುಕೊಂಡು ಏಕಕಾಲದಲ್ಲಿ ತಿಲವನ್ನು ಹವನಮಾಡುತಾ ಇದ್ದರು. ಕ್ರಮವಾಗಿ ಒಬ್ಬರು ಸಂಕಲ್ಪಮಾಡಿ ಹತ್ತುಜನ ಹೋಮಮಾಡುವಾಗ ಮಂತ್ರದಲ್ಲಿ ಏಕವಚನವನ್ನು ಪ್ರಯೋಗಿಸಿ ಕೆಡಿಸುತಾ ಇದ್ದರು. ಶಾಸ್ತ್ರಿಗಳು ಹೋದಕೂಡಲೆ ಅಬದ್ಧವಾಗಿ ಉಚ್ಚಾ

ರಣೆಯಾಗುತಾ ಇದ್ದ ಮಂತ್ರವನ್ನು ಕೇಳಿ, ಹೋಮವನ್ನು ಸ್ವಲ್ಪ ನಿಲ್ಲಿಸಿ ಎಂದು ಹೇಳಿ, ಬ್ರಹ್ಮತ್ವಕ್ಕೆ ಕೂತಿದ್ದವರನ್ನು ಕುರಿತು ಆಕ್ಷೇಪಣೆ ಮಾಡಿದರು. ಸರಿಯಾದ ಉತ್ತರ ಬರಲಿಲ್ಲ. ಚರ್ಚೆ ಹುಟ್ಟಿತು. ಈ ಸಿಂಹದ ಬಾಯಿಗೆ ಯಾರೂ ಹತ್ತಲಾರದೇ ಹೋದರು. ಅದುವರೆಗೆ ಹತ್ತುಜನ ಬ್ರಾಹ್ಮಣರಲ್ಲಿ ಒಬ್ಬೊಬ್ಬರು ಸುಮಾರು ಮೂರು ಸಾವಿರಸಾರಿ ಹೋಮಮಾಡಿದ್ದರು. ಹತ್ತು ಜನರೂ ಸೇರಿ ಮಾಡಿದ ಹೋಮವು ಸುಮಾರು ೩೦ ಸಾವಿರಸಾರಿ ಆದಂತೆ ಆಯಿತು. ಮೂರರಲ್ಲಿ ಒಂದು ಭಾಗ ಮುಗಿದಂತೆ ಆಯಿತು. ಮಂತ್ರಲೋಪವಾದ್ದರಿಂದ ಇದು ನಿಷ್ಫಲವಾಯಿತೆಂದು ರಾಮಶಾಸ್ತ್ರಿಗಳು ಹೇಳಿದರು. ಈ ಗಲಭೆಯು ಕೃಷ್ಣರಾಜ ಒಡೆಯರವರ ಸನ್ನಿಧಾನದವರೆಗೂ ಮುಟ್ಟಿತು. ಮಡಿಯಾಗಿ ಕೂತಿದ್ದ ದೊರೆಯು ಇದನ್ನು ಕೇಳಿ ಹೋಮಕುಂಡದ ಬಳಿಗೆ ಪಾಲುಮಾರಿಕೆ ಇಲ್ಲದೆ ಬಂದು ವಿಚಾರಿಸಿದರು. ಆಗ ತಿಮ್ಮಂಣಶಾಸ್ತ್ರಿಯು — ಈಗ ೩೦,೦೦೦ ಸಾರಿ ಹೋಮವಾಗಿದ್ದರೂ ಮಂತ್ರಲೋಪವಾಯಿತೆಂತಲೂ, ಅದರಿಂದ ೩,೦೦೦ ಸಾರಿ ಹೋಮವಾದಂತೆಯೇ ಭಾವಿಸಬೇಕೇ ಹೊರತು ಬೇರೆ ಇಲ್ಲವೆಂತಲೂ ಕುಣಿಗಲ ರಾಮಶಾಸ್ತ್ರಿಗಳು ಹೇಳುತಾರೆ. ಅಕ್ಷರ ಸ್ಖಾಲಿತ್ಯ ಸ್ವಲ್ಪ ಆದ

ಮಾತ್ರಕ್ಕೇ ೩೦,೦೦೦ ಸಾರಿ ಹವನವಾದ್ದು ಸುಳ್ಳಾಯಿತೆ? ಇದರಲ್ಲೆಲ್ಲಾ ಏನಿದೆ? ಇಷ್ಟುಹೊತ್ತಿಗೆ ಮೂರರಲ್ಲಿ ಒಂದು ಭಾಗವೇ ಮುಗಿಯಿತು. ಉಳಿದದ್ದನ್ನು ಈ ದಿವಸ ೧೧ ಗಂಟೆಯೊಳಗಾಗಿ ಮುಗಿಸಬಹುದು. ಹಾಗಿಲ್ಲದೆ ಮಂತ್ರ ಲೋಪವಾಯಿತೆಂಬ ಕಾರಣದಮೇಲೆ ಇಲ್ಲದ ಧ್ಯಾನಸವನ್ನು ಕಟ್ಟಿಕೊಂಡು ರಾಮಶಾಸ್ತ್ರಿಗಳು ಹೇಳುವಂತೆ ಹವನವನ್ನು ಪುನಃ ಆರಂಭಿಸಿದರೆ, ಖಾಸಾ ಆರೋಗಣೆಗೆ ಬಹಳ ಹೊತ್ತಾಗುತ್ತೆ, ಎಂದು ಹೇಳಿದನು.

ಅದಕ್ಕೆ ರಾಮಶಾಸ್ತ್ರಿಗಳಿಗೆ ಕೋಪ ಬಂತು. ಮುಖ ಕೆಂಪಾಯಿತು. ಅವರು ಆಗಲೇ ಮಹಾರಾಜನನ್ನು ಕುರಿತು—ಪ್ರಭುವೇ, ಈ ಶಾಂತಿಯನ್ನು ಮಾಡತಕ್ಕದ್ದು ಸ್ವಾಮಿಯ ಕ್ಷೇಮಾರ್ಥವಾಗಿ. ಶಾಸ್ತ್ರೋಕ್ತವಾದ ಈ ಕರ್ಮವನ್ನು ಉಕ್ತವಾದ ಮಂತ್ರೋಚ್ಚಾರಣೆಯಿಂದಲೇ ಮಾಡಬೇಕು. ಮಂತ್ರವಿಲ್ಲದೆ ಕರ್ಮ ಹುಟ್ಟುವುದಿಲ್ಲ. ಅಂಥಾ ಮಂತ್ರಲೋಪವಾದರೆ ಕರ್ಮವೂ ಲೋಪವಾಯಿತು. ಇದರಿಂದ ರಾಜನಿಗೂ ರಾಜ್ಯಕ್ಕೂ ಹಾನಿಯುಂಟಾಗುವುದು. ಲೋಪಕ್ಕೋಸ್ಕರ ಪ್ರಾಯಶ್ಚಿತ್ತಮಾಡಿ ತಮ್ಮ ಶ್ರೇಯಸ್ಸಿಗಾಗಿ ಈ ಹೋಮವನ್ನು ಪುನಃ ಆರಂಭಮಾಡಲೇಬೇಕು. ಇದು ವೇದೋಕ್ತವಾದ ಕರ್ಮ, ಪೊಳ್ಳುಹರಟೆಯಲ್ಲ, ಫಲಾ

ಫಲಗಳನ್ನು ಅರಿಯದೆ, ಇದರಿಂದೇನು ಅದರಿಂದೇನು? ಎಂದು ದೋರಣೆಯನ್ನುಮಾಡಿ ಶುಂಠರಂತೆ ವಾದಿಸುವುದಕ್ಕೆ ನನಗೆ ಬಾರದು, ಎಂದು ಘರ್ಜಿಸಿ ಹೇಳಿದರು. ಆಸ್ತಿಕ್ಯಕ್ಕೆ ತಾಯಿಮನೆಯಾದ ಆ ಮಹಾಪ್ರಭುವು—ನಮಗೂ ನಮ್ಮ ಬಂಧುವರ್ಗಕ್ಕೂ ನಮ್ಮ ಪ್ರಜೆಗಳಿಗೂ ಪರಮೇಶ್ವರನು ಶ್ರೇಯಸ್ಸನ್ನು ಉಂಟುಮಾಡಲೆಂದು ಈ ಹೋಮವನ್ನು ನಾವು ಮಾಡಿಸುತ್ತೇವೆ. ಮಂತ್ರವಿಲ್ಲದ ಹೋಮದಿಂದ ಪ್ರಯೋಜನವಿಲ್ಲ, ಮಂತ್ರಲೋಪವಾದರೆ ಎಲ್ಲವೂ ಲೋಪವಾಯಿತು. ರಾಮಶಾಸ್ತ್ರಿಗಳ ಅಪ್ಪಣೆಯಾದಂತೆ ಪ್ರಾಯಶ್ಚಿತ್ತ ಮಾಡಿ ಪುನಃ ಹೋಮವನ್ನು ಆರಂಭಮಾಡತಕ್ಕದ್ದೇ ಸರಿಯಾದ ಮಾರ್ಗ. ಕರ್ಮಾರಂಭದಲ್ಲಿ "ಶ್ರೀಪರಮೇಶ್ವರಪ್ರೀತ್ಯರ್ಥಂ" ಎಂದು ಸಂಕಲ್ಪಮಾಡಿದೇವೆ. ಭಗವಂತನು ವೇದರೂಪವಾಗಿಯೂ ಮಂತ್ರರೂಪವಾಗಿಯೂ ಇದಾನೆಂದು ತಿಳಿದು ತಿಳಿದೂ ಆ ಪರಶಿವನ ಕೋಪಕ್ಕೆ ನಾನು ಪಾತ್ರನಾಗಲೆ? ನನಗೆ ಜಾಗ್ರತೆಯಾಗಿ ಊಟವಾಗತಕ್ಕದ್ದು ಮುಖ್ಯವಲ್ಲ. ಮೂರು ದಿವಸವಾದರೂ ನಾನು ಉಪವಾಸವಾಗಿ ಇದ್ದೇನು. ಎಲ್ಲವೂ ಸಾಂಗವಾಗಿ ಲೋಪವಿಲ್ಲದೆ ಜರಗಲಿ ಎಂದು, ರಾಮಶಾಸ್ತ್ರಿಗಳ ಮಾತಿನಲ್ಲಿ ಸಂತೋಷವನ್ನೂ ತಿಮ್ಮಣ್ಣಶಾಸ್ತ್ರಿಗಳ ಮಾತಿನಲ್ಲಿ ಅಸಮಾಧಾ

ರವನ್ನೂ ತೋರಿಸುತಾ ಹೇಳಿದರು. ಅಯ್ಯೋ! ಇಂಥಾ ಪುಣ್ಯಾತ್ಮನಾದ ಮಹಾರಾಜ ಯಾವರಾಜ್ಯಕ್ಕೆತಾನೆ ಎಂದಿಗೆ ಸೊರೆತಾನು? ಅಪ್ಪಣೆಯಾದ ಪ್ರಕಾರ ರಾಮಶಾಸ್ತ್ರಿಗಳು ತಾವೇ ಕೂತುಕೊಂಡು ಹೋಮವನ್ನು ಆರಂಭಮಾಡಿಸಿ ಜಾಗ್ರತೆಯಾಗಿ ಮುಗಿಸಿದರು. ದೊರೆಗೆ ಬಹಳ ಸಂ ತೋಷವಾಯಿತು. ಆ ಮಹಾಸಭೆಯಲ್ಲಿ ತಾನು ಹೇಳಿದ ಮಾತನ್ನು ಶುಂಠವಾದವೆಂಬದಾಗಿ ಕರೆದರಲ್ಲಾ ಎಂದು ತಿಮ್ಮಂಣಶಾಸ್ತ್ರಿಗೆ ರಾಮಶಾಸ್ತ್ರಿಗಳಲ್ಲಿದ್ದ ಕ್ರೋಧವು ಮತ್ತೂ ಹೆಚ್ಚಾಯಿತು.

ಯಾತರಲ್ಲಿಯೇ ಆಗಲಿ ಲೇಶಲೋಪವಾದಾಗ್ಗೂ ರಾಮ ಶಾಸ್ತ್ರಿಗಳು ಸಹಿಸದೆ ಹಿಡಿದ ಕೆಲಸವನ್ನು ಪೂರ್ತಿಯಾಗಿ ಆಕ್ಷೇಪಣೆಗೆ ಅವಕಾಶವಿಲ್ಲದಹಾಗೆ ಮಾಡತಕ್ಕವರೆಂಬ ಅಂಶ ಈ ಲಕ್ಷತಿಲಹೋಮದ ಪ್ರಸ್ತಾಪದಿಂದ ಚೆನ್ನಾಗಿ ತಿಳಿಯಬಹುದಾಗಿದೆ. ಮಹಾತ್ಮರಿಗೆ ಯಾವ ಕರ್ಮವೂ ಅಲ್ಪ ವಾಗಿ ತೋರುವುದಿಲ್ಲ. ಎಷ್ಟು ಅಲ್ಪವಾದ ಸಂಗತಿಯಾ ದಾಗ್ಗೂ ಅದರಲ್ಲಿ ಒಂದು ವಿಧಿ ಸೇರಿಕೊಂಡೇ ಇರು ವುದು. ವಿಷಯತುಚ್ಛವೆಂದು ತಿರಸ್ಕರಿಸಿದರೆ, ಅದಕ್ಕೆ ಸಂ ಬಂಧಿಸಿದ ವಿಧಿಯನ್ನೇ ತಿರಸ್ಕರಿಸಿದಂತಾಯಿತು. ಯಾತ ರಲ್ಲಿ ಯಾವವಿಧಿ ಮಿಳಿತವಾಗಿದೆ ಎಂದು ಕಂಡುಕೊಳ್ಳಲು

ಶಕ್ತಿಯಿಲ್ಲದವರು ಅಲ್ಪವಿಚಾರವೆಂದು ಅಸಡ್ಡೆ ಮಾಡುತಾರೆ. ಈ ವಿಧವಾದ ತಿರಸ್ಕಾರಭಾವ ಯಾವ ಮನುಷ್ಯನಲ್ಲಿ ಹುಟ್ಟುತ್ತೊ ಆ ಮನುಷ್ಯನ ಯೋಗ್ಯತೆಯು ಅಷ್ಟರಮಟ್ಟಿಗೆ ಕಡಮೆಯಾದ್ದೆಂದು ನಾವು ತಿಳಿದುಕೊಂಡರೆ ತಪ್ಪಾಗುವುದಿಲ್ಲ. ಹೀಗೆಯೇ ಮನುಷ್ಯ ಸಾಮಾನ್ಯರಿಗೂ ಇದನ್ನು ಹೋಲಿಸಬಹುದು. ಪ್ರತಿ ಮನುಷ್ಯನೂ ಯಾವುದಾದರೂ ಒಂದು ಸಂಗತಿಯಲ್ಲಿ ಸಹಜವಾದ ಮತ್ತು ಅದ್ವಿತೀಯವಾದ ಸಾಮರ್ಥ್ಯ ಉಳ್ಳವನಾಗಿರುತಾನೆ. ಯಾವ ಕೆಲಸಕ್ಕೆ ಯಾವ ಮನುಷ್ಯ ಉಪಯೋಗಿಸುತಾನೆ ಎಂಬುವುದನ್ನು ಕಂಡು ಅಂಥಾ ಕಾರ್ಯಕ್ಕೆ ಅವನನ್ನು ಉಪಯೋಗಿಸಲು ತಕ್ಕ ಪುರುಷಮಾತ್ರ ಸಿಕ್ಕುವುದಾದರೆ ಆತನೇ ಪ್ರತಿಭಾವಿಶೇಷ ಉಳ್ಳವನು, ಮಹಾತ್ಮನು ಎಂದು ನಾವು ಭಾವಿಸಬಹುದು. ಇದನ್ನು ಅರಿಯದೆ ಯಾವ ಪದಾರ್ಥವನ್ನಾಗಲಿ ಯಾವ ಮನುಷ್ಯನನ್ನಾಗಲಿ ಕಂಡರೆ ಕೇವಲ ಅಲ್ಪವೆಂದು ತಿಳಿದು ಅಹಂಕಾರದಲ್ಲಿ ಮೆರೆಯುತಾರೆ. ಈ ಅಹಂಭಾವವೇ ಇವರ ಯೋಗ್ಯತೆಯನ್ನು ತೋರಿಸುತ್ತೆ.

——ಂಃಂ——

# ೯ನೇ ಅಧ್ಯಾಯ.

## ಅನುಗಮ ಪಾದ—ಸರ್ವತ್ರೋಪಯೋಗ.

---

ಇದುವರೆಗೆ ರಾಮಶಾಸ್ತ್ರಿಗಳಲ್ಲಿ ಓದಿ ಪಂಡಿತರಾದವರೊಳಗೆ ಕವಿ ವರದಾಚಾರ್ಯ, ವಿಜಯರಾಘವಾಚಾರ್ಯ, ಕುರಚ್ಚಿ ರಂಗಾಚಾರ್ಯ, ರಾಮಗಿರಿ ಶಾಮಾಚಾರ್ಯ, ಇವರೇ ಮೊದಲಾದವರು ದಿಗ್ದಂತಿ ಪಂಡಿತರಾಗಿದ್ದರು. ಕವಿ ವರದಾಚಾರ್ಯರು ಮೈಸೂರಲ್ಲಿಯೇ ನಿಂತರು. ಕುರಚ್ಚಿ ರಂಗಾಚಾರ್ಯರು ಅವರ ಸೀಮೆಗೆ ಹೊರಟುಹೋದರು. ವಿಜಯರಾಘವಾಚಾರ್ಯರು ಕಂಚಿಗೆ ಹೋದರು. ರಾಮಗಿರಿ ಶಾಮಾಚಾರ್ಯರು ಮೈಸೂರಿನಲ್ಲಿಯೇ ನಿಂತರು.

ವಿಷ್ಣುಪಾದಾಚಾರ್ಯರು ಎಂಬ ಇನ್ನೊಬ್ಬ ಪಂಡಿತರಿದ್ದರು. ಇವರು ಪಂಡಿತರಾದ ಜುಲಪಿ ಕೃಷ್ಣಾಚಾರ್ಯರ ಮಕ್ಕಳು. ಈ ವಿಷ್ಣುಪಾದಾಚಾರ್ಯರು ಕೆಲವುದಿವಸ ತಂದೆಯಲ್ಲಿಯೂ ತರುವಾಯ ರಾಮಶಾಸ್ತ್ರಿಗಳಲ್ಲಿಯೂ ವ್ಯಾಸಂಗಮಾಡಿ ತರ್ಕ ವೇದಾಂತಶಾಸ್ತ್ರಗಳಲ್ಲಿ ನಿಸ್ಸೀಮರಾದರು. ಇವರ ಬುದ್ಧಿಯು ಅದ್ವೈತ ಸಿದ್ಧಾಂತದಲ್ಲಿ ವಿಶೇಷವಾಗಿ ಪ್ರವರ್ತಿಸಿತು. ಇವರು ಮನಸ್ಸಿನ ಅಭಿಪ್ರಾಯವನ್ನು ಬೇರೇ ಇಟ್ಟುಕೊಂಡು ಹೊರಗೆ ಬೇರೇ ವಿಧವಾಗಿ ನಟಿಸುತಾ ಇರ

ಲಿಲ್ಲ. ಮನಸ್ಸಿಗೆ ತೋರಿದ್ದನ್ನೇ ಬಾಯಲ್ಲಿ ಆಡುವುದು, ಬಾಯಲ್ಲಿ ಆಡಿದ್ದನ್ನೇ ಕೈಲಿ ಮಾಡುವುದು, ಈ ಗುಣ ಇವರಲ್ಲಿ ಇತರರು ನೋಡಿ ಆಶ್ಚರ್ಯಪಡುವಮಟ್ಟಿಗೂ ಇತ್ತು. ಇದೇ ಪ್ರಕಾರ ವಿಷ್ಣುಪಾದಾಚಾರ್ಯರು ಸಭೆಯಲ್ಲಿ ಪೂರ್ವಪಕ್ಷ ಸಿದ್ಧಾಂತವನ್ನು ಮಾಡುವಾಗ್ಗೆ ದ್ವೈತಮತಕ್ಕೆ ವಿರೋಧವಾಗಿಯೂ ಅದ್ವೈತಕ್ಕೆ ಅನುಸಾರವಾಗಿಯೂ ವಾದಿಸುತಾ ಬಂದರು. ಈ ಕಾರಣದಮೇಲೆ ಸ್ವಮತಸ್ಥರಾದ ಮಾಧ್ವರಿಗೂ ವಿಷ್ಣುಪಾದಾಚಾರ್ಯರಿಗೂ ವೈಮನಸ್ಯ ಹುಟ್ಟಿತು. ವೈಷ್ಣವರೆಲ್ಲಾ ಸೇರಿ ಇವರಿಗೆ ಬಹಿಷ್ಕಾರವನ್ನು ಹಾಕಿದೇವೆಂದು ಹೇಳಿ ಇವರಲ್ಲಿ ಬಳಕೆಯನ್ನು ಬಿಟ್ಟರು. ವಿಷ್ಣುಪಾದಾಚಾರ್ಯರು ಇದಕ್ಕೆ ಹೆದರದೆ, ತಾವು ವೈಷ್ಣವರಿಗ ಪ್ರತಿಯಾಗಿ ಬಹಿಷ್ಕಾರವನ್ನು ಹಾಕಿದೇವೆಂದು ಹೇಳಿ, ಹವ್ಯಕವ್ಯಾದಿಗಳಿಗೂ ಆಚಾರ್ಯರುಗಳನ್ನು ಕರೆಯದೆ, ಎಲ್ಲಾ ಕಾರ್ಯಗಳಿಗೂ ಸ್ಮಾರ್ತರನ್ನೇ ಕರೆಯುತಾ, ಸ್ಮಾರ್ತಾಚಾರವನ್ನೇ ಇಟ್ಟುಕೊಂಡು, ದ್ವೈತಿಗಳನ್ನು ಮನಸ್ಸು ಬಂದಹಾಗೆ ಸಮಯದಲ್ಲಿ ದೂಷಿಸಲು ಆರಂಭಿಸಿದರು. ಯಾರಾದರೂ ಸ್ವಯೂಥ ಕಲಹವನ್ನು ಸಹಿಸುವುದು ಸುಲಭವಲ್ಲ. ಮಠಪತಿಗಳು ಸಹಿತ ವಿಷ್ಣುಪಾದಾಚಾರ್ಯರ ಮಹಾಪಾಂಡಿತ್ಯಕ್ಕೆ ಹೆದರಿಕೊಂಡಿದ್ದರು. ಒಂದು ಸಮಯದಲ್ಲಿ ಉತ್ತರಾದಿ ಸ್ವಾಮಿಗಳು

ಮೈಸೂರಿಗೆ ಬಂದಿದ್ದ ವೇಳೆಯಲ್ಲಿ ಕೃಷ್ಣರಾಜ ಒಡೆಯರ ವರು ಸ್ವಾಮಿಗಳಿಗೂ ವಿಷ್ಣುಪಾದಾಚಾರ್ಯರಿಗೂ ಸಖ್ಯವನ್ನು ಮಾಡಿಸಿದರು. ಈ ಪಂಡಿತರಿಗೆ ಆ ಮಠದಿಂದ ವೇತನ ಕೂಡ ಸಲ್ಲುವಂತೆ ಆಯಿತು. ಇಂಥಾ ವಿದ್ವತ್ತಿನ ಹುಲಿಗಳನ್ನು ಕೆಣಕಿ ತಮ್ಮ ಮಾನವನ್ನೂ ಇತರ ವೈಷ್ಣವ ಸಂಸ್ಥಾನಿಕರ ಮಾನವನ್ನೂ ಕಳೆಯಬೇಡಿರೆಂದು ಸ್ವಾಮಿಗಳವರು ಅಲ್ಪ ಜನರಿಗೆ ತಿಳಿಸಿ ಗಲಭೆಯನ್ನು ತಪ್ಪಗೆ ಮಾಡಿದರು.

ಈ ವಿಷ್ಣುಪಾದಾಚಾರ್ಯರು ತರ್ಕವೇದಾಂತದಲ್ಲಿಯೇ ಅಲ್ಲದೆ ಜ್ಯೋತಿಷದಲ್ಲಿಯೂ ಅದ್ವಿತೀಯವಾದ ಪಾಂಡಿತ್ಯವನ್ನು ಸಂಪಾದಿಸಿದ್ದರು. ಇವರು ಇತರ ಪಂಚಾಂಗಳ ಜೋಯಿಸರಹಾಗೆ ದಿನಶುದ್ಧಿ, ತಾರಾಬಲ ಇವುಗಳನ್ನು ಹೇಳುವುದರಲ್ಲಿಯೂ, ಜಾತಕಗಳನ್ನು ಗುಣಿಸುವುದರಲ್ಲಿಯೂ ಕಾಲವನ್ನು ಕಳೆದವರಲ್ಲ. ಇವರ ಮನೆಯು ಮೈಸೂರ ಪಟ್ಟಣದ ಕೋಟೆಯ ಉತ್ತರದಿಕ್ಕಿನ ಗೋಡೇ ವತ್ತಿನ ಬೀದಿಯಲ್ಲಿತ್ತು. ಅದು ದೊಡ್ಡ ಮನೆ, ಎರಡು ಅಂತಸ್ತು ಉಳ್ಳದ್ದಾಗಿತ್ತು. ಆ ಮನೆಯಲ್ಲಿ ಆಚಾರ್ಯರು ಒಂದು ಕಿರುಮನೆಯನ್ನು ಬಿಡುವುಮಾಡಿ ಅದರಲ್ಲಿ ಒಂದು ಯಂತ್ರವನ್ನು ಹೂಡಿ ನವಗ್ರಹಗಳೂ ಇತರ ನಕ್ಷತ್ರಗಳೂ

ಸಹಾ ಕಾಣುವಹಾಗೆ ಆಯಾ ಸ್ಥಾನಗಳಲ್ಲಿ ಗೋಳಗಳನ್ನು ತಗಲಿಸಿ, ಅದಕ್ಕೆ ದೀಪವನ್ನು ಹತ್ತಿಸಿ ಕೀಲನ್ನು ತಿರುಗಿ ಸುತಾ, ಗ್ರಹಗಳ ಮತ್ತು ನಕ್ಷತ್ರಗಳ ಸಂಚಾರವನ್ನು ತೋರಿಸುತಾ ಇದ್ದರು. ಇದನ್ನು ಮೈಸೂರಲ್ಲಿ ವೃದ್ಧರಾದವರು ಅನೇಕರು ನೋಡಿದಾರೆ. ಈವಿಧವಾದ ಶಕ್ತಿಯು ಅತ್ಯಪೂರ್ವವಾದ್ದು. ಇವರನ್ನು ಸ್ಮರಿಸಿದರೆ ಭಾಸ್ಕರಾಚಾರ್ಯರು, ಆರ್ಯಭಟ, ಮೊದಲಾದ ದೈವಜ್ಞರ ಜ್ಞಾಪಕ ಬರುತಾ ಇದೆ. ಮತ್ತು ದ್ರಾವಿಡ ಸಂಪ್ರದಾಯದ ಸ್ಮಾರ್ತರಾದ ಕಾಶೀ ಶೇಷಶಾಸ್ತ್ರಿಗಳು ಎಂಬುವರೂ ಇದ್ದರು. ಇವರು ವ್ಯಾಕರಣದಲ್ಲಿ ಮಹಾ ಪಂಡಿತರಾಗಿ ಅನೇಕ ಶಿಷ್ಯರಿಂದ ಕೂಡಿದವರಾಗಿದ್ದರು. ಮತ್ತು ಹೊಯಿಸಲಕರ್ಣಾಟ ಕುಲದ ಕುಟ್ಟಿಶಾಸ್ತ್ರಿಗಳು ಎಂಬುವರು ಕಣಿವೇ ಕೆಳಗಿನಿಂದ ಬಂದು ಮೈಸೂರಲ್ಲಿ ನೆಳೆಗೊಂಡಿದ್ದರು. ಇವರು ಎಲ್ಲಾ ಶಾಸ್ತ್ರವನ್ನೂ ಬಲ್ಲವರು. ಶ್ರೌತದಲ್ಲಿ ಹೆಚ್ಚಾದ ಪಾಂಡಿತ್ಯವುಳ್ಳವರು. ಇವರೇ ಮೊದಲಾದ ಅನೇಕ ಜನ ಪಂಡಿತರು ರಾಮಶಾಸ್ತ್ರಿಗಳಿಗೆ ಸಮಕಾಲಿಕರಾಗಿದ್ದರು. ಇಂಥಾ ವಿದ್ವಾಂಸರನ್ನುಳ್ಳ ಕೃಷ್ಣರಾಜ ಒಡೆಯರವರ ಸಭೆಯು ನವನಿಧಿಗಳಿಗೆ ಸಮಾನವಾಗಿತ್ತು. ಆ ಧರ್ಮಾತ್ಮನು ಇವರುಗಳಿಗೆ ಆಶ್ರಯಭೂತನಾಗಿ ಬೇಕಾದ್ದನ್ನು ಕೊಡುತಾ

ವಿದ್ವತ್ತನ್ನು ನಾನಾಬಗೆಯಲ್ಲಿ ವೃದ್ಧಿಮಾಡುತಾ ಇದ್ದ ಕಾರಣ, ಈ ಮಹಾ ಪುರುಷನ ಔದಾರ್ಯವೂ ಯಶಸ್ಸೂ ಈ ಭರತಖಂಡದಲ್ಲಿಯೇ ಅಲ್ಲದೆ ಇಂಗ್ಲೆಂಡು ಮೊದಲಾದ ದೇಶಗಳಲ್ಲಿಯೂ ಹೆಚ್ಚಾಗಿ ಪ್ರಚಾರಗೊಂಡಿತು.

ಈ ದೊರೆಯ ಖ್ಯಾತಿಯನ್ನು ಕೇಳಿ ಸೌಮ್ಯ ಸಂವತ್ಸರದಲ್ಲಿ ಮೈಸೂರ ಸಂಸ್ಥಾನಕ್ಕೆ ಇಬ್ಬರು ವಿದ್ವಾಂಸರು ಬಂದರು. ಇವರಿಬ್ಬರಿಂದಲೂ ರಾಮಶಾಸ್ತ್ರಿಗಳ ಖ್ಯಾತಿಯು ಮತ್ತೂ ಹೆಚ್ಚುವುದಕ್ಕೆ ಕಾರಣವಾಯಿತು. ಇವರಲ್ಲಿ ಮೊದಲನೆಯವರು ಅನುಗಮುಭಟ್ಟಾಚಾರಿ ವೆಂಕಟರಾಯಶಾಸ್ತ್ರಿ; ಈತನು ತೆನುಗು ರಾಜ್ಯದವನು. ತನ್ನ ಸೀಮೆಯಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಓದಿಕೊಂಡು ಸಂಪಾದಿಸಿದ ಪಾಂಡಿತ್ಯದಲ್ಲಿ ತೃಪ್ತಿಯಿಲ್ಲದೆ, ಬಂಗಾಳದಲ್ಲಿರುವ ನವದ್ವೀಪಕ್ಕೆ ಹೋಗಿ ಶಾಸ್ತ್ರವ್ಯಾಸಂಗವನ್ನು ಮಾಡಿ ಅನುಗಮುಭಟ್ಟಾಚಾರ್ಯ ಎಂಬ ಹೆಸರನ್ನು ಸಂಪಾದಿಸಿದನು. ವೇದಶಾಸ್ತ್ರಗಳಲ್ಲಿ ಉದ್ಗ್ರಂಥವೇ ಮೊದಲಾದ್ದನ್ನು ಹೇಳುವುದಕ್ಕೆ ಬಂಗಾಳದಲ್ಲಿರುವ ನದಿಯ ಅಥವ ನವದ್ವೀಪವು ಅನಾದಿಯಾಗಿ ಮೂಲಸ್ಥಾನವಾಗಿದೆ. ಈಗಲೂ ಈ ವಿದ್ವತ್ಪಾಠಶಾಲೆಯ ಪ್ರಖ್ಯಾತಿಯು ಕೆಟ್ಟಿಲ್ಲ. ಉತ್ತರ ದೇಶದಿಂದ ಬರತಕ್ಕ ಮಹಾ ಪಂಡಿತರು ಎನ್ನುವರೆಲ್ಲಾ

ನವದ್ವೀಪದಲ್ಲಿ ಅಥವ ಕಾಶಿಯಲ್ಲಿ ಓದಿದವರಾಗಿದಾರೆ. ಬಂಗಾಳಿಯವರೂ ಇತರ ಔತ್ತರೇಯರೂ ಅಸಾಧಾರಣವಾದ ಪಾಂಡಿತ್ಯವನ್ನು ಇಂಗ್ಲಿಷಿನಲ್ಲಿ ಈಚೆಗೆ ಸಂಪಾದಿಸಿ ಆರ್ಯವಂಶ ಕುಲೋತ್ಪನ್ನರನ್ನು ವಿಶಾರಿಸಿದವರು ಇಲ್ಲವೆಂದು ಹೇಗೆ ಹೆಸರನ್ನು ಉಳಿಸಿದಾರೋ, ಹಾಗೆಯೇ ಪೂರ್ವದಲ್ಲಿಯೂ ಸಂಸ್ಕೃತವಿದ್ಯಾವ್ಯಾಸಂಗವನ್ನು ಕುರಿತು ಹಿಂದುಸ್ಥಾನಕ್ಕೆ ಬಂದಿರುವ ಗೌರವವನ್ನು ಸಂಪಾದಿಸಿದವರಾಗಿದಾರೆ. ಈ ಜನರು ಈಗ ಹೇಗೆ ತಲೆ ಮನುಷ್ಯರಾಗಿದಾರೋ ಹಿಂದೆಯೂ ಹಾಗೆಯೇ ಎಲ್ಲಾ ಭಾಗದಲ್ಲಿಯೂ ನಮಗೆ ಮಾರ್ಗದರ್ಶಿಗಳಾಗಿದ್ದರು. ಓದಿ ಪಂಡಿತರಾದವರಿಗೆ ಬಿರುದನ್ನೂ ಹೆಸರನ್ನೂ ನವದ್ವೀಪದ ವಿದ್ವತ್ಪರಿಷತ್ತಿನವರು ಕೊಡತಕ್ಕ ವಾಡಿಕೆ ಇದೆ. ಬ್ರಹ್ಮಾನಂದರು, ಗದಾಧರಭಟ್ಟಾಚಾರ್ಯರು ಮುಂತಾದವರೆಲ್ಲಾ ಇಲ್ಲಿನವರೇ ಆಗಿದಾರೆ.

ಹೀಗೆ ಅನುಗಮಭಟ್ಟಾಚಾರ್ಯ ಎಂಬ ಬಿರುದನ್ನು ಹೊಂದಿದ ವೆಂಕಟರಾಯಶಾಸ್ತ್ರಿಯು ಅನೇಕ ಸಂಸ್ಥಾನಗಳಿಗೆ ಹೋಗಿ ವಾಕ್ಯಾರ್ಥವನ್ನು ಮಾಡಿ ಜಯರೇಖೆಯನ್ನು ಪಡೆದನು. ಮೈಸೂರು ಸೀಮೆಯ ರಾಜನ ಔದಾರ್ಯವೂ ಈ ದೊರೆಯ ಸಭೆಯನ್ನು ಅಲಂಕರಿಸುತಾ ಇದ್ದ ರಾಮ

ಶಾಸ್ತ್ರಿಗಳ ಹೆಸರವಾಸಿಯೂ, ಒಂದು ದಿಕ್ಕಿನಲ್ಲಿ ಆಸೆಯೂ ಮತ್ತೊಂದು ದಿಕ್ಕಿನಲ್ಲಿ ವಿದ್ಯಾಗರ್ವದಿಂದುಂಟಾದ ಕ್ರೋಧವೂ, ಆ ಶಾಸ್ತ್ರಿಯನ್ನು ಬಂಧಿಸಿ ಮೈಸೂರಿಗೆ ಎಳೆದು ತಂದವು. ವೆಂಕಟರಾಯಶಾಸ್ತ್ರಿಯು ಬಹು ಅಟ್ಟಹಾಸವಾಗಿ ಬಂದು ಮೈಸೂರ ದೊರೆಯ ಭೇಟಿಯನ್ನು ಮಾಡಿಕೊಂಡನು. ರಾಮಶಾಸ್ತ್ರಿಗಳ ಗರ್ವಭಂಗ ಮಾಡಬೇಕೆಂಬುವುದು ಈತನಿಗೆ ದೊಡ್ಡ ಕೋರಿಕೆಯಾಗಿತ್ತು.

ವೆಂಕಟರಾಯಶಾಸ್ತ್ರಿಗೂ ರಾಮಶಾಸ್ತ್ರಿಗಳಿಗೂ ಪರಕಾಲಮಠದಲ್ಲಿ ೬-೭ ದಿವಸ ವಾಕ್ಯಾರ್ಥವಾಯಿತು. ಶಂಕರ ಭಟ್ಟಾಚಾರ್ಯರ ಸಿದ್ಧಾಂತಪ್ರಕಾರ ಅನುಗಮವಿಧಿಯಲ್ಲಿ ವೆಂಕಟರಾಯಶಾಸ್ತ್ರಿಯು ವಿಷಯವನ್ನು ಪ್ರತಿಪಾದನ ಮಾಡುತಾ ಬಂದನು. ಮೈಸೂರಲ್ಲಿದ್ದ ಶಾಸ್ತ್ರಜ್ಞರೆಲ್ಲಾ ಸೇರಿದ್ದರು. ಮಾಧ್ಯಸ್ಥಕ್ಕೆ ಕೂತಿದ್ದ ಕಾಶೀ ತಿಮ್ಮಣ್ಣಾಚಾರ್ಯರು ವೆಂಕಟರಾಯಶಾಸ್ತ್ರಿಯ ವಾದ ತಮಗೆ ಗೊತ್ತಾಗಲಿಲ್ಲವೆಂದು ಹೇಳಿದರು. ಮತ್ತೆ ಯಾರಿಗೂ ಇದು ಗೊತ್ತಾಗಲಿಲ್ಲ. ಎಲ್ಲರೂ ಚಿತ್ರದಲ್ಲಿ ಬರೆದ ಪ್ರತಿಮೆಗಳಹಾಗೆ ತುಟಿ ಪಿಟಕ್ಕನ್ನದೆ ಕೂತಿದ್ದರು. ದಕ್ಷಿಣದೇಶದಲ್ಲಿ ತ್ರಿಯಂಬಕಶಾಸ್ತ್ರಿಗಳ ಸಿದ್ಧಾಂತರೀತ್ಯಾ ಪ್ರಕಾರವಿಧಿಯು ಪ್ರಚಾರದಲ್ಲಿತ್ತು. ಭಟ್ಟಾಚಾರಿಯ ಉಪಪಾದನ ತಮಗೆ ಗೊತ್ತಾಗಲಿಲ್ಲವೆಂದು

ತಿಮ್ಮಣ್ಣಾಚಾರ್ಯರು ಹೇಳಿದ್ದಕ್ಕೆ ರಾಮಶಾಸ್ತ್ರಿಗಳು—ಚಿಂತೆ ಇಲ್ಲ, ವೆಂಕಟರಾಯಶಾಸ್ತ್ರಿಗಳು ಹೇಳುವುದನ್ನೆಲ್ಲಾ ಹೇಳಿ ಮುಗಿಸಲಿ ಎಂದರು. ತರುವಾಯ ಅರಮನೆಯಲ್ಲಿ ಎಂಟು ದಿವಸ ವಾಕ್ಯಾರ್ಥವಾಯಿತು. ವೆಂಕಟರಾಯಶಾಸ್ತ್ರಿಯು ಅನುಗಮವಿಧಿಯಲ್ಲಿ* ಮಾಡಿದ ಉಪಪಾದನೆಯನ್ನು ಚೆನ್ನಾಗಿ ಗ್ರಹಿಸಿಕೊಂಡು ರಾಮಶಾಸ್ತ್ರಿಗಳು ಭಟ್ಟಾಚಾರಿ ಹೇಳಿದ ಅಂಶಗಳನ್ನೇ ತಿರುಗಿಸಿ ಅದೇ ಅನುಗಮ ರೀತಿಯಲ್ಲಿ ಹೊಸ ರೀತಿಗಳನ್ನು ತೆಗದು ಪ್ರತ್ಯುತ್ತರವನ್ನು ಕೊಟ್ಟು ಆ ನೈಯ್ಯಾಯಿಕನಮೇಲೆ ಕೋಟಿಗಳನ್ನು ಏರಿಸಿದರು. ಇವರು ಹೇಳಿದ್ದು ವೆಂಕಟರಾಯಶಾಸ್ತ್ರಿಗೆ ಮಾತ್ರ ಅರ್ಥವಾಯಿ

---

* ೧. ಅನುಗಮವಿಧಿ—ಎಂದರೆ ಒಂದು ವಿಷಯವನ್ನು ಕುರಿತು ಪೂರ್ವಪಕ್ಷಸಿದ್ಧಾಂತವನ್ನು ಮಾಡುವಾಗ ಆ ವಿಷಯಕ್ಕೆ ಸಂಬಂಧಪಟ್ಟ ಧರ್ಮಗಳು ಅಥವಾ ಗುಣಗಳನ್ನು ವಿವರಿಸದೆ ಆಯಾ ವಿಷಯಕ್ಕೆ ಸಹಜವಾದ ಆಯಾ ಧರ್ಮಗಳನ್ನುಳ್ಳದ್ದು ಎಂದು ಸಂಕ್ಷೇಪವಾಗಿ ಹೇಳತಕ್ಕ ವಿಧಾನ

೨. ಪ್ರಕಾರವಿಧಿ—ಎಂದರೆ ಒಂದು ವಿಷಯವನ್ನು ಕುರಿತು ಪೂರ್ವಪಕ್ಷಸಿದ್ಧಾಂತವನ್ನು ಮಾಡುವಾಗ ಆ ವಿಷಯಕ್ಕೆ ಸಂಬಂಧಪಟ್ಟ ಧರ್ಮಗಳು ಅಥವಾ ಗುಣಗಳನ್ನೆಲ್ಲಾ ವಿವರಿಸಿ ವಿಸ್ತಾರವಾಗಿ ಹೇಳತಕ್ಕ ವಿಧಾನ.

ತೇ ಹೊರತು ಮತ್ತೆ ಸಭ್ಯರೆಲ್ಲರಿಗೂ ಕಬ್ಬಿಣದ ಕಡಲೆಯಾಗಿತ್ತು. ಕೊನೆಕೊನೆಗೆ ರಾಮಶಾಸ್ತ್ರಿಗಳು ತೆಗೆದ ಹೊಸರೀತಿಯು ವೆಂಕಟರಾಯಶಾಸ್ತ್ರಿಗೇ ಅರ್ಥವಾಗದೇ ಹೋಯಿತು. ಎಲ್ಲರಿಗೂ ದಿಗ್ಭ್ರಮೆಯಾಯಿತು. ಅನುಗಮ ಭಟ್ಟಾಚಾರ್ಯರ ಬಾಯಿಗಟ್ಟಿತು. ಮೈಸೂರಿನ ತರ್ಕಸಿಂಹದ ಘರ್ಜನೆಯು ಅರಮನೆಯಲ್ಲೆಲ್ಲಾ ತುಂಬಿತು. ಆಗ ಬಂಗಾಳದ ಭಟ್ಟಾಚಾರಿಯು ಬಹು ಸಂತೋಷಪಟ್ಟು ರಾಮಶಾಸ್ತ್ರಿಗಳನ್ನು ಬಾಚಿ ತಬ್ಬಿಕೊಂಡು—ನಾನು ಅನೇಕ ರಾಜ್ಯಗಳನ್ನು ನೋಡಿದೆ, ಅನೇಕ ವಿದ್ವಾಂಸರಲ್ಲಿ ವಾದ ಮಾಡಿದೆ; ಈ ರಾಮಶಾಸ್ತ್ರಿಗಳು ಸಾಕ್ಷಾತ್ ಗೌತಮರು; ಇವರು ನ್ಯಾಯಶಾಸ್ತ್ರಕ್ಕೆ ಮೂಲಸ್ಥಾನವಾಗಿದಾರೆ; ಇದು ಬರೀ ಪಾಂಡಿತ್ಯವಲ್ಲ; ಅಸಾಧಾರಣವಾದ ಪ್ರತಿಭೆ, ಎಂದು ದೊರೆಯ ಎದುರಿಗೆ ಆ ಮಹಾ ಸಭೆಯಲ್ಲಿ ಕೊಂಡಾಡಿದನು. ಮೈಸೂರ ಸೀಮೆಗೆಲ್ಲಾ ಎಲ್ಲಿ ಈ ವೆಂಕಟರಾಯಶಾಸ್ತ್ರಿಯಿಂದ ಅಪಮಾನವಾಗುತ್ತೋ ಎಂದು ಅಂತಃಭಯಪಡುತಾ ಇದ್ದ ಕೃಷ್ಣರಾಜ ಒಡೆಯರವರಿಗೆ ಅತ್ಯಂತವಾಗಿ ಆನಂದವಾಯಿತು. ರಾಜರು ರಾಮಶಾಸ್ತ್ರಿಗಳಿಗೆ ೪,೦೦೦ ರೂಪಾಯಿಗಳನ್ನೂ ಕಂಠಿ ಮೊದಲಾದ ಭಾರಿ ಖಿಲ್ಲತ್ತನ್ನೂ, ವೆಂಕಟರಾಯಶಾಸ್ತ್ರಿಗೆ ೩,೦೦೦ ರೂಪಾಯಿಗಳನ್ನೂ

ಅದೇ ಪ್ರಕಾರ ಖಿಲ್ಲತ್ತನ್ನೂ, ಕೊಡಿಸಿ ಬಹುಮಾನ ಮಾಡಿದರು. ಸಭೆಯೆಲ್ಲಾ ಜಯಜಯವೆಂದು ಕೂಗಿತು. ತರುವಾಯ ಅನುಗಮಭಟ್ಟಾಚಾರಿಯು ಕೆಲವು ದಿವಸ ಮೈಸೂರಲ್ಲಿಯೇ ಇದ್ದು ತನ್ನ ದೇಶಕ್ಕೆ ಹೊರಟುಹೋದನು.

ಆಮೇಲೆ ರಾಮಶಾಸ್ತ್ರಿಗಳು ಅನುಗಮವಿಧಿಯಲ್ಲಿಯೂ ಶಿಷ್ಯರಿಗೆ ಪಾಠವನ್ನು ಹೇಳುತಾ ಬಂದರು. ಪ್ರಾಚೀನ ವಿಧಿಯಾದ ಪ್ರಕಾರವಿಧಿಯಲ್ಲಿಯೂ ನವೀನ ಪದ್ಧತಿಯಾದ ಅನುಗಮಪದ್ಧತಿಯಲ್ಲಿಯೂ ವಾಕ್ಯಾರ್ಥಮಾಡುವುದನ್ನು ಎಲ್ಲರೂ ತಿಳಿದುಕೊಂಡರು. ಅನಂತರ ಕಾಶಿ, ಗಯು, ಪ್ರಯಾಗ, ನವದ್ವೀಪ, ಬ್ರಹ್ಮಾವರ್ತ, ವರ್ಧಮಾನ, ದರ್ಭಂಗ, ಕಲ್ಕತ್ತ, ಈ ಸ್ಥಳಗಳಲ್ಲೆಲ್ಲಾ ಶಾಸ್ತ್ರಾರ್ಥ ಜರುಗುವಾಗ್ಗೆ ರಾಮಶಾಸ್ತ್ರಿಗಳನ್ನು ಒಬ್ಬ ಸೂತ್ರಗಾರರಂತೆ ಭಾವಿಸುತ್ತಲೂ ಇವರ ಸಿದ್ಧಾಂತಗಳನ್ನೇ ವಿಧಿಯಾಗಿಟ್ಟುಕೊಳ್ಳುತ್ತಲೂ ಬಂದರು.

ರಾಮಶಾಸ್ತ್ರಿಗಳ ಯಶಸ್ಸನ್ನು ಮತ್ತೂ ಹೆಚ್ಚಿಸಲು ಆಸ್ಪದ ದೊರೆಯುವಹಾಗೆ ಮೈಸೂರಿಗೆ ಇನ್ನೊಬ್ಬ ವಿದ್ವಾಂಸ ಬಂದನು. ಈತನ ಹೆಸರು ಪಾವಗಡದ ಗಂಗಾಧರ ಸೋಮಯಾಜಿ. ಈತನು ಸರ್ವತೋಮುಖವೆಂಬ ಯಜ್ಞವನ್ನು ಮಾಡುತೇನೆಂದು ಸಂಕಲ್ಪಮಾಡಿ ಇದಕ್ಕೆ

ಬೇಕಾಗುವ ಸಮಸ್ತ ಸಲಕರಣಗಳೂ ಮೈಸೂರ ಮ
ಹಾ ಸಂಸ್ಥಾನದಲ್ಲಿ ದೊರೆಯಬಹುದೆಂದು ನಂಬಿ ಪುರ
ಪ್ರವೇಶವನ್ನು ಮಾಡಿ ಅಲ್ಲಿ ದೊಡ್ಡ ಅಧಿಕಾರಿಗಳನ್ನು ಅ
ನುಸರಿಸಿ ಅವರ ಮೂಲಕ ದೊರೆಯ ಭೇಟಿಮಾಡಿಕೊಂ
ಡನು. ಸದ್ಧರ್ಮಕ್ಕೆ ಮೂಲಸ್ಥಾನವಾದ ಕೃಷ್ಣರಾಜ ಒಡೆ
ಯರು ಈ ಸೋಮಯಾಜಿಯನ್ನು ನೋಡಿ ಸಂತೋಷ
ಪಟ್ಟು — ತಮ್ಮಂಥಾ ದೊಡ್ಡವರು ನಮ್ಮ ಸಂಸ್ಥಾನಕ್ಕೆ
ದಯಮಾಡಿಸಿ ಇಂಥಾ ಪುಣ್ಯಕಾರ್ಯಗಳನ್ನು ನಡಿಸುವುದ
ರಿಂದ ನಮಗೂ ನಮ್ಮ ರಾಜ್ಯಕ್ಕೂ ಕ್ಷೇಮ ಉಂಟಾಗು
ವುದು. ಅದರ ವೆಚ್ಚವೇನಾದಾಗ್ಯೂ ಅರಮನೆಯಿಂದ ತ
ಮಗೆ ದೊರೆಯುವುದು, ಚಿಂತೆ ಬೇಡ, ಎಂದು ಅಪ್ಪಣೆ
ಕೊಡಿಸಿದರು. ಆಗ ಸೋಮಯಾಜಿಯು ಶ್ರೌತದಲ್ಲಿ
ಅದ್ವಿತೀಯರೆಂದು ಹೆಸರುಗೊಂಡಿದ್ದ ಕುಟ್ಟಿಶಾಸ್ತ್ರಿಗಳನ್ನು
ವಿಚಾರಿಸಲಾಗಿ ಅವರು ಈ ಯಜ್ಞದ ಪ್ರಯೋಗವನ್ನು
ಸರಿಯಾಗಿ ಹೇಳದೇ ಹೋದರು. ಸೋಮಯಾಜಿಯು
ರಾಮಶಾಸ್ತ್ರಿಗಳ ಮರೆಹೊಕ್ಕು ತಮ್ಮಿಂದ ಈ ದೊಡ್ಡಕಾ
ರ್ಯ ನೆರವೇರಬೇಕು ಎಂದು ಹೇಳಿಕೊಂಡರು. ಶಾಸ್ತ್ರಿಗಳು
ಆತನ ಕೈಹಿಡಿದು ಮಾತಕೊಟ್ಟು ಮೈಸೂರ ಸೀಮೆಯ
ಲ್ಲಿಯೂ ಇತರ ಸ್ಥಳಗಳಲ್ಲಿಯೂ ಇರತಕ್ಕ ಶ್ರೌತಿಗಳೆಲ್ಲ

ರನ್ನೂ ಮೈಸೂರಿಗೆ ಕರೆಯಿಸಿಕೊಂಡರು. ಇವರಲ್ಲಿ ಬೆಂಗಳೂರ ಕೃಷ್ಣಸೋಮಯಾಜಿಗಳೂ ಒಬ್ಬರಾಗಿದ್ದರು. ಹೀಗೆ ಅನೇಕಜನ ಶ್ರೌತಿಗಳ ಮಂಡಲಿಯಲ್ಲಿ ಗ್ರಂಥಗಳನ್ನಿಟ್ಟುಕೊಂಡು ಸರ್ವತೋಮುಖಕ್ಕೆ ಬೇಕಾದ ಪ್ರಯೋಗ ವಿಧಿಯನ್ನು ಶಾಸ್ತ್ರಿಗಳು ಕಲ್ಪಿಸಿದರು.

ನಾಲ್ಕು ಯಾಗಶಾಲೆಗಳನ್ನು ಕಟ್ಟಿಸಿದರು. ಒಂದು ನೂರು ಜನ ಋತ್ವಿಕ್ಕುಗಳು ನೇಮಕವಾದರು. ಈ ದೊಡ್ಡ ಯಾಗದಲ್ಲಿ ಸದಸ್ಯ ಮತ್ತು ಸೋಮಪ್ರವಾಕ ಎಂಬ ಅಧಿಕಾರಗಳನ್ನು ಶಾಸ್ತ್ರಿಗಳು ತಾವೇ ವಹಿಸಿದರು. ಈ ಮಖವನ್ನು ನೋಡಲು ಅನೇಕ ದೂರದೇಶಗಳಿಂದ ಜನರೂ ಪಂಡಿತರೂ ಬಂದಿದ್ದರು. ಈ ಕ್ರತುವನ್ನು ಆದ್ಯಂತವಾಗಿ ಶಾಸ್ತ್ರಿಗಳು ತಾವೇ ಮಾಡಿಸಿದರು. ಆಕ್ಷೇಪಣೆಗೆ ಲೇಶವೂ ಅವಕಾಶವಿಲ್ಲದಂತೆ ನಡೆದ ಈ ಪ್ರಯೋಗ ವಿಧಾನವನ್ನು ಮೊದಲಿನಿಂದಲೂ ನೋಡುತಾ ಕಾದುಕೊಂಡು ಕೂತಿದ್ದ ಕುಟ್ಟಿಶಾಸ್ತ್ರಿಗಳೂ ಮತ್ತು ಇವರ ಹಿರೀಮಗ ವಾಂಛೇಶ್ವರಶಾಸ್ತ್ರಿಗಳೂ ಸಹಾ ಮೆಚ್ಚಿ ರಾಜಸಭೆಯಲ್ಲಿ ಸ್ತೋತ್ರಮಾಡಿದರು. ಕುಟ್ಟಿಶಾಸ್ತ್ರಿಗಳು ಸಾಧಾರಣರಲ್ಲ. ಒಳ್ಳೇ ಕರ್ಮಠರು, ನಿಷ್ಠರು, ಎಲ್ಲಾ ಭಾಗದಲ್ಲಿಯೂ ಪಂಡಿತರೆಂದು ಹೆಸರನ್ನು ಹೊಂದಿದ್ದರು. ಇ

ವರಲ್ಲಿ ಕೃಷ್ಣರಾಜ ಒಡೆಯರವರಿಗೆ ವಿಶೇಷವಾಗಿ ಭಕ್ತಿ ಇತ್ತು. ಇವರು ಅರಮನೆಗೆ ಮೇನದಲ್ಲಿ ಕೂತುಹೋಗುತಾ ಇದ್ದರು. ಈ ವೃದ್ಧರ ವಿಷಯದಲ್ಲಿ ರಾಣಿವಾಸದಲ್ಲಿ ಸಹಿತ ಗೋಷ ಇರಬೇಡವೆಂದು ರಾಜರ ಅಪ್ಪಣೆಯಾಗಿತ್ತು. ಇಂಥವರೂ ಕೂಡ ರಾಮಶಾಸ್ತ್ರಿಗಳ ಸಾಮರ್ಥ್ಯವನ್ನು ಕೊಂಡಾಡಿದ್ದು ಸಾಧಾರಣ ವಿಷಯವೆಂದು ಭಾವಿಸಲಾಗದು. ಆಗ ಕೃಷ್ಣರಾಜ ಪ್ರಭುವು ರಾಮಶಾಸ್ತ್ರಿಗಳಿಗೆ ಬಹುಮಾನವನ್ನು ಮಾಡಿ ಅವರಿಗೆ ೧೦೯. ಹತ್ತು ವರಹ ಸಂಬಳವನ್ನು ನೇಮಕಮಾಡಿದರು. ಇವರನ್ನು ಧರ್ಮಾಧಿಕಾರಿಗಳೆಂದು ನೇಮಿಸಿದರು. ಇದೆಲ್ಲಾ ಒಂದುಕಡೆ ಶಾಸ್ತ್ರಿಗಳ ಪ್ರತಿಷ್ಟೆಯನ್ನು ಹೆಚ್ಚಿಸಿದ್ದಲ್ಲದೆ ತಿಮ್ಮಂಣಶಾಸ್ತ್ರಿಯ ಹೊಟ್ಟೇ ಸಂಕಟವನ್ನೂ ಹೆಚ್ಚಿಸಿತು.

ರಾಮಶಾಸ್ತ್ರಿಗಳ ಪ್ರಾಬಲ್ಯವನ್ನು ಹೇಗಾದರೂ ಇತರ ಪಂಡಿತರ ಮುಖೇನ ಮುರಿಯಬೇಕೆಂದು ಯೋಚಿಸಿ ಕ್ರೋಧದಿಂದ, ತಿಮ್ಮಂಣಶಾಸ್ತ್ರಿಯು ಯಾವ ವಿದ್ವಾಂಸ ಎಲ್ಲಿದಾನೆ ಎಂದು ಕಾಗದಗಳನ್ನು ಬರೆದು ವರ್ತಮಾನವನ್ನು ತರಿಸಿಕೊಳ್ಳುತ್ತಲೇ ಇದ್ದನು. ಗದ್ದವಾಲ, ವನಪರ್ತಿ, ಈ ಪ್ರಾಂತ್ಯದಲ್ಲಿ ಈಗಲೂ ಹೈದರಾಬಾದು ಸಂಸ್ಥಾನಕ್ಕೆ ವಶವರ್ತಿಗಳಾಗಿರುವ ಚಿಕ್ಕರಾಜವಾಡೆಗಳು ಇವೆ. ಇ

ಲ್ಲಿನ ರಾಜರು ಪೂರ್ವದಿಂದ ನಮ್ಮ ಮತ, ಪೂರ್ವಾಚಾರ ಇವುಗಳಲ್ಲಿ ಭಕ್ತಿಯಿಟ್ಟುಕೊಂಡು ಇದಾರೆ. ಪ್ರತಿ ವರುಷವೂ ಒಂದು ವಿದ್ವತ್ಸಭೆಯನ್ನುಮಾಡಿ ಪಂಡಿತರಿಗೆ ಬಹುಮಾನಗಳನ್ನೂ ವರ್ಷಾಶನವನ್ನೂ ಈಗಲೂ ಕೊಡುತಾರೆ. ಈ ದೊರೆಗಳ ಪ್ರೋತ್ಸಾಹದಿಂದ ಆ ಸಣ್ಣ ಸಂಸ್ಥಾನಗಳಲ್ಲಿ ಕೆಲವು ವಿದ್ವಾಂಸರು ಆಶ್ರಯಿಸಿಕೊಂಡಿದಾರೆ. ಆ ಪ್ರಾಂತ್ಯಗಳಲ್ಲಿ ಹೆಸರಾದ ಮುದ್ದುಕೃಷ್ಣಾಚಾರ್ಯರೆಂಬ ಒಬ್ಬ ವಿದ್ವಾಂಸರು ಇದ್ದರು.

ಈತನನ್ನು ಕರೆಯಿಸಿ ರಾಮಶಾಸ್ತ್ರಿಗಳಮೇಲೆ ಬಿಟ್ಟು ಶಾಸ್ತ್ರಿಗಳಿಗೆ ಮುಖಭಂಗಮಾಡಿ ತನ್ನ ಒಳದುಃಖವನ್ನು ತೀರಿಸಿಕೊಳ್ಳಬೇಕೆಂದು ತಿಮ್ಮಣ್ಣಶಾಸ್ತ್ರಿಯು ಯೋಚಿಸಿದನು. ಅಯ್ಯೋ, ನಿರ್ಭಾಗ್ಯ ತಿಮ್ಮಣ್ಣಶಾಸ್ತ್ರಿ! ಇವರಿಬ್ಬರ ಯೋಗ್ಯತೆಯನ್ನು ತಿಳಿದುಕೊಳ್ಳುವ ಯೋಗ್ಯತೆ ಈ ತಿಮ್ಮಣ್ಣನಿಗೆ ಇರಲಿಲ್ಲ. ಈತನು ವೈದಿಕಕ್ಕೆ ಓದಿದವನಲ್ಲ, ಲೌಕಿಕಕ್ಕೆ ಬರೆದವನಲ್ಲ. ವೈದಿಕಮಂಡಲಿಯಲ್ಲಿ ತಾನು ಲೌಕಿಕ ಬೃಹಸ್ಪತಿ ಎಂತಲೂ, ಲೌಕಿಕ ಮಂಡಲಿಯಲ್ಲಿ ತಾನು ವೈದಿಕ ಸರಸ್ವತಿ ಎಂತಲೂ, ಹೇಳಿಕೊಂಡು ಕಾಲಕ್ಷೇಪಮಾಡುತಾ ಇದ್ದ ಈ ಮನುಷ್ಯನಿಗೆ ಹೆಚ್ಚಿನ ಸಂಗತಿ ತಿಳಿಯುವುದು ಶ್ರಮ. ನೀವು ಆಶ್ವಲಾಯನರೊ ಆಪಸ್ತಂಬರೊ?

ಎಂದು ಕೇಳಿದ ಒಂದು ಪ್ರಶ್ನೆಗೆ, ಇವೆರಡು ಶಬ್ದಗಳನ್ನೂ ಜನ್ಮಪ್ರಭೃತಿ ಕಿವಿಯಲ್ಲಿಯೂ ಕೇಳದೇ ಇದ್ದ ಒಬ್ಬ ಬ್ರಾಹ್ಮಣನು, ಅಷ್ಟು ಆಶ್ವಲಾಯನರೂ ಅಲ್ಲ, ಅಷ್ಟು ಆಪಸ್ತಂಬರೂ ಅಲ್ಲ, ನಾವು ಪ್ರಧಾನ ವೆಂಕಪ್ಪಯ್ಯನವರ ನಂಟರು ಎಂದು ಉತ್ತರಕೊಟ್ಟನು. ಇಂಥಾ ಒಬ್ಬ ಬ್ರಾಹ್ಮಣಕೀಟದ ಜ್ಞಾಪಕವು ತಿಮ್ಮಣ್ಣಶಾಸ್ತ್ರಿಯ ವಿಷಯವನ್ನು ಕೇಳಿದಾಗೆಲ್ಲಾ ಬರುತ್ತಿದೆ. ನವರಾತ್ರೆಯಲ್ಲಿ ಅರಮನೇಯೆದುರಿಗೆ ಇರುವ ಕುಂದನ ಮಟ್ಟಿಯಲ್ಲಿ ಕಾಳಗವಾಡಲು ಗರಡೀ ಸಾಮುಮಾಡಿದವರನ್ನೂ ಜಟ್ಟಿಗಳನ್ನೂ ಜೋಡಿ ಕಟ್ಟುವ ರೀತಿ ನಮ್ಮ ತಿಮ್ಮಣ್ಣಶಾಸ್ತ್ರಿಗಳ ಕಿವಿಯ ಮೇಲೆ ಬಿದ್ದಿತ್ತೋ ಇಲ್ಲ, ಗರಡೀ ಉಷ್ತಾದಿಗಳಂತೆ ಜೋಡಿ ಕಟ್ಟಿದ್ದರೋ ತಿಳಿಯದು. ಶಾಸ್ತ್ರಾರ್ಥವೂ ಇದರಂತೆಯೇ ಕೈಕೈಕೂಡಿಸಿ ಆಡುವ ಮುಷ್ಟಾಮುಷ್ಟಿ ಕಾಳಗವೆಂದು ಭಾವಿಸಿ, ನ್ಯಾಯ ವೇದಾಂತ ಶಾಸ್ತ್ರದ ಜಟ್ಟೀ ಕಾಳಗವಾಡಲು ರಾಮಶಾಸ್ತ್ರಿಗಳಿಗೆ ಮುದ್ದುಕೃಷ್ಣಾಚಾರಿಯು ಸರಿಯಾದ ಜೋಡಿಆಗಬಹುದೆಂದು ಒಳಗೇ ಬರೆದು ಆ ವಿದ್ವಾಂಸನನ್ನು ಮೈಸೂರಿಗೆ ತಿಮ್ಮಣ್ಣಶಾಸ್ತ್ರಿಯೇ ಕರಿಸಿದನು. ಮುದ್ದುಕೃಷ್ಣಾಚಾರಿಯು ಬಹು ಡಂಭವಾಗಿ ಬಂದು ಕೃಷ್ಣರಾಜ ಒಡೆಯರವರ ಭೇಟಿಮಾಡಿದನು. ರಾಮ

ಶಾಸ್ತ್ರಿಗಳಿಗೂ ಈತನಿಗೂ ವಾಕ್ಯಾರ್ಥ ಜರಗಬೇಕೆಂದು ಗೊತ್ತಾಯಿತು. ಅರಮನೆಯಲ್ಲಿ ಸಭೆ ಸೇರಿತು. ಶಾಸ್ತ್ರಿಗಳು ಸುಮ್ಮನೆ ಕೂತುಕೊಂಡರು. ಇವರ ಶಿಷ್ಯರಾದ ರಾಮಗಿರಿ ಶಾಮಾಚಾರ್ಯರಿಗೂ ಮುದ್ದುಕೃಷ್ಣಾಚಾರ್ಯರಿಗೂ ಅನುವಾದ ಪ್ರತ್ಯನುವಾದಕ್ಕೆ ಮೊದಲಾಯಿತು. ಸ್ವಲ್ಪದೂರ ವಾಕ್ಯಾರ್ಥ ಜರಗಿತು. ತರುವಾಯ ಶಾಸ್ತ್ರಿಗಳ ಇನ್ನೊಬ್ಬ ಪ್ರಿಯ ಶಿಷ್ಯರಾದ ವಿಜಯರಾಘವಾಚಾರ್ಯರು ವಾಕ್ಯಾರ್ಥಕ್ಕೆ ಆರಂಭಮಾಡಿದರು. ಈತನು ಹೇಳಿದ್ದು ಯಾವುದೂ ಮುದ್ದುಕೃಷ್ಣಾಚಾರ್ಯರಿಗೆ ಅರ್ಥವೇ ಆಗಲಿಲ್ಲ. ಆಗ ದೇಶಾಂತರದಿಂದ ಬಂದ ವಿದ್ವಾಂಸನು —ಈ ಸೀಮೆಗೆ ವಾಕ್ಯಾರ್ಥಕ್ಕಾಗಿ ನಾನು ಬಂದದ್ದು ನಿಮಗಳ ಸಂಗಡ ಅಲ್ಲ, ನಿಮ್ಮ ಗುರುಗಳಾದ ರಾಮಶಾಸ್ತ್ರಿಗಳೇ ಕೂತುಕೊಳ್ಳಬೇಕು ಎಂದನು. ಆಗ ಅಲ್ಲಿದ್ದ ಪಂಡಿತರೊಬ್ಬರು ಆತನ ಮುಖವನ್ನು ನೋಡಿ— ಸ್ವಾಮಿ, ತಮ್ಮೊಡನೆ ಶಾಸ್ತ್ರಾರ್ಥಕ್ಕೆ ಆ ದಕ್ಷಿಣಾಮೂರ್ತಿ ಬರಬೇಕೆ? ವಿಜಯರಾಘವಾಚಾರ್ಯರಿಗೆ ತಾವು ಉತ್ತರವನ್ನು ಹೇಳಿದರೆ ಸಾಕಾಗಿದೆಯಲ್ಲ ಎಂದರು. ಇತರರೂ ಕೂಡ ರಾಮಶಾಸ್ತ್ರಿಗಳೊಡನೆ ಸೆಣಸಾಟ ಬೇಡವೆಂದು ಎಷ್ಟು ಬಗೆಯಲ್ಲಿ ಹೇಳಿದಾಗ್ಯೂ ಆಚಾರ್ಯರು ಮೌರ್ಖ್ಯ

ಮಾಡಿದ್ದರಿಂದ ಶಾಸ್ತ್ರಿಗಳೇ ಕೂತು ಸ್ವಲ್ಪದರಲ್ಲಿ ಅವರ ಪರಾಕ್ರಮವನ್ನು ಅದಗಿಸಿದರು. ಮುದ್ದುಕೃಷ್ಣಾಚಾರ್ಯರ ಮುದ್ದು ಮುಖವು ಬಾಡಿತು. ತಿಮ್ಮಣ್ಣಶಾಸ್ತ್ರಿಯ ಪರಾಕ್ರಮವೂ ಅಡಗಿದಂತೆಯೇ ಆಯಿತು. ಇದು ಪರೀಧಾವಿ ಸಂವತ್ಸರದಲ್ಲಿ ಜರಗಿತು.

---

## ೧೦ ನೇ ಅಧ್ಯಾಯ.

### ದರಬಾರಿನ ಸ್ಥಿತಿ.

---

ಕೃಷ್ಣರಾಜ ಒಡೆಯರವರಿಗೆ ಮದುವೆಯಾದ ಹೆಂಡಿರು ಮೂರುಜನ ಇದ್ದರು. ಹಿರೀ ಹೆಂಡತಿಯು ಬಾಗಳಿ ದೇಶೇಅರಸಿನವರ ಮನೆತನದ ಹೆಂಣುಮಗಳು ಲಕ್ಷ್ಮೀವಿಲಾಸದ ಅನವರು. ಈಕೆಯು ಈಗಿರುವ ಕರ್ನಲ್ ದೇಶರಾಜೆ ಅರಸಿನವರ ದತ್ತು ತಂದೆಯಾದ ದೇಶೇಅರಸಿನವರಿಗೆ ಸೋದರ ಅತ್ತೆಯಾಗಬೇಕು. ಎರಡನೇ ಹೆಂಡತಿಯು ರಮಾವಿಲಾಸದ ಅಮ್ಮನವರು. ಇವರು ಕತ್ತಿ ಗೋಪಾಲರಾಜೇಅರಸಿನವರ ಮನೇ ಹೆಂಣುಮಗಳು; ಈಕೆಯು ಸ್ವರ್ಗಸ್ಥರಾದ ಚಾಮರಾಜೇಂದ್ರ ಒಡೆಯರವರ ಜನಕ ತಂದೆಯಾದ ಕೃಷ್ಣೇ ಅರಸಿನವರಿಗೆ ಸೋದರತ್ತೆಯಾಗಬೇಕು. ಇವರಿಬ್ಬರೂ ಕೃಷ್ಣರಾಜ ಒಡೆಯರವ

ರಿಗೆ ಪಟ್ಟದ ಹೆಂಡಿರು. ನಿಜವಾದ ಅರಸು ಮನೆತನದ ವರು. ಶ್ರೀರಂಗಪಟ್ಟಣವನ್ನು ಗೆದ್ದುಕೊಂಡು ಟೀಪು ಸುಲ್ತಾನನ್ನು ನಾಶಮಾಡಿ ಈಗ ಮೈಸೂರು ಸೀಮೆ ಎಷ್ಟಿದೆಯೋ ಅಷ್ಟನ್ನು, ಕೃಷ್ಣರಾಜ ಒಡೆಯರವರ ಮಲತಾಯಿಯಾದ ದೊಡ್ಡಮ್ಮಣ್ಣಿಯವರಲ್ಲಿ ಮೊದಲು ಮದರಾಸು ಗವರ್ನರು ಮಾಡಿಕೊಂಡಿದ್ದ ಕರಾರನ್ನು ಅನುಸರಿಸಿ, ಕೃಷ್ಣರಾಜ ಒಡೆಯರವರಿಗೆ ಕೊಟ್ಟು ಮೈಸೂರ ರಾಜರೆಂದು ಅವರಿಗೆ ಪಟ್ಟವನ್ನು ಕಟ್ಟಿಸಿ, ಜನರಲ್ ಹಾರಿಸ್, ಕರನಲ್ ವೆಲ್ಲೆಸ್ಲಿ ( ಡ್ಯೂಕ್ ವೆಲ್ಲಿಂಗರ್ಟ ) ಈ ಕಂಪನಿ ಸರದಾರರು ಖ್ಯಾತಿಯನ್ನು ಪಡೆದರು. ಈ ಸರದಾರರ ಅನುಮತಿಯನ್ನು ಪಡೆದು ದಿವಾನ ಪೂರ್ಣಯ್ಯನವರು ಮೇಲೆ ಹೇಳಿದ ಇಬ್ಬರು ರಾಜಪುತ್ರಿಯರನ್ನೂ ತಂದು ದೊರೆಗೆ ಮದುವೆಮಾಡಿದ್ದರು. ಈಚೆಗೆ ತುರುವೇಕೆರೇ ಮನೆತನದ ಹೆಂಣುಮಗಳಾದ ಸೀತಾವಿಲಾಸದ ಅಮ್ಮನವರನ್ನು ಕೃಷ್ಣರಾಜ ಒಡೆಯರವರು ಮದುವೆಯಾದರು.

ಇವರಲ್ಲಿ ಜ್ಯೇಷ್ಠಪತ್ನಿಯಾದ ಲಕ್ಷ್ಮೀವಿಲಾಸದ ಅಮ್ಮನವರು ವಿದ್ಯಾವಂತರು, ಬುದ್ಧಿಶಾಲಿ, ಔಚಿತ್ಯವನ್ನು ಅರಿತವರು. ಇವರು ಒಂದೆರಡುವೇಳೆ ಗರ್ಭಿಣಿಯಾಗಿ

ದ್ದಂತೆ ತಿಳಿಯಬರುತ್ತೆ. ಆದರೆ ನಿಷ್ಪ್ರಯೋಜನವಾಯಿತು. ಕೃಷ್ಣರಾಜ ಒಡೆಯರ ಯವ್ವನದಲ್ಲಿ ನೀತಿಕೆಟ್ಟವರು ಸಾವಿರಾಪ್ಯಕ್ಕೆ ಸೇರಿ ದುರ್ಮಾರ್ಗಕ್ಕೆ ಎಳೆದಕಾರಣ, ರಾಜ್ಯದ ಆಡಳತ ಕೆಟ್ಟುಹೋಗಿ ಪ್ರಜೆಗಳ ಹಾಹಾಕಾರ ಬಲವಾಯಿತು. ಅನೇಕರು ದೊರೆಯಲ್ಲಿ ಎಷ್ಟು ದೂರುಹೇಳಿಕೊಂಡರೂ ಪ್ರಯೋಜನವಿಲ್ಲವಾಯಿತು. ಪ್ರಜೆಗಳ ದೂರನ್ನೂ, ಅವರ ಅಭಿಪ್ರಾಯವನ್ನೂ, ದೂರದೃಷ್ಟಿಯುಳ್ಳವರ ಬುದ್ಧಿವಾದವನ್ನೂ, ಕೇಳುವ ವಿಷಯದಲ್ಲಿ ದೊರೆಗೆ ಕಿವುಡು ಬಂತು. ನಿಜವಾದ ಸ್ಥಿತಿಯನ್ನು ನೋಡುವ ಭಾಗದಲ್ಲಿ ಅವರ ಒಳಕಂಣಿಗೆ ಯವ್ವನದಲ್ಲಿಯೇ ಚಾಳೀಸ ಬಂತು. ಸ್ಥಳದ ಸೀಃಕರ ಜೊತೆಗೆ ಪರಸ್ಥಳದ ಆಶೆಬಡಕರು ಸೇರಿಕೊಂಡು ಕೆಟ್ಟದಾರಿಯನ್ನು ಎಲ್ಲಾ ಭಾಗದಲ್ಲಿಯೂ ಬೋಧಿಸುತಾ ಬಂದರು. ದುಷ್ಟಪರಿವಾರದ ಬೇಳವೆ ಮಾತುಗಳು ಬಹು ಶ್ರಾವ್ಯವಾದ ಗಾನವಾಯಿತು. ಬುದ್ಧಿವಾದವು ಗಾರ್ಧಭ ಗಾನವಾಯಿತು. ರಾಜ್ಯವೆಲ್ಲಾ ಕಟ್ಟುಹರಿದ ಪಂಜಾಗಿ ದಿಕ್ಕು ಕೆಟ್ಟಿತು. ಇವೆಲ್ಲವನ್ನೂ ಕಂಡು ಬುದ್ಧಿವಂತರಾದ ಲಕ್ಷ್ಮೀವಿಲಾಸದ ಅಮ್ಮನವರು ದೊರೆಗೆ ತಿಳುವಳಿಕೆಯನ್ನು ಹೇಳುತಾ ಬಂದರು. ಇದು ದೊರೆಯ ಮನಸ್ಸಿಗೆ ಸರಿಬೀಳದೆ ಲಕ್ಷ್ಮೀ

ವಿಲಾಸದವರಲ್ಲಿ ಮುಖಮುನಸಾಗಿ ಕೊನೆಗೆ ಅದೇ ದ್ವೇಷಕ್ಕೆ ಕಾರಣವಾಯಿತು. ದೊರೆಯು ಇವರೊಡನೆ ಮಾತನಾಡುವುದನ್ನು ಬಿಟ್ಟರು.

ಹಿಂದೆ ಹೇಳಿದ ದಿವಾನ ವೆಂಕಟೇಅರಸಿನ ತಮ್ಮನಾದ ದಾಸಪ್ಪಾಜಿಯು ದೊರೆಯಲ್ಲಿ ಹೆಚ್ಚಾದ ಅಹಂಕಾರವನ್ನು ತೋರಿಸಿ ರಾಜರನ್ನು ಲಕ್ಷ್ಯಮಾಡದೆ ಇದ್ದನು. ಅದುವರೆಗೆ ಬಂದೀಹಾಕಿದ ಹೆಂಡಿರು ದೊರೆಗೆ ಹೆಚ್ಚುತಾಬಂದರು. ಮದನವಿಲಾಸದ ಅಮ್ಮನವರಿಗೆ ಹುಟ್ಟಿದ ಕುಮಾರನಿಗೆ ಅರಸುಗಳೆಲ್ಲಾ ರಾಜಪುತ್ರನಾದ ಯುವರಾಜನಿಗೆ ಆಗುವ ಮರ್ಯಾದೆಮಾಡಬೇಕೆಂತಲೂ, ಅರಸುಗಳೆಲ್ಲಾ ಆ ಕುಮಾರನ ಪಙ್ತಿಯಲ್ಲಿ ಭೋಜನಕ್ಕೆ ಕೂತುಕೊಳ್ಳಬೇಕೆಂತಲೂ, ದೊರೆಯು ನಿರ್ಬಂಧಪಡಿಸಿದರಂತೆ. ಅದರಿಂದ ಅರಸುಗಳು ಅನೇಕರು ತಿರುಗಿಬಿದ್ದರು. ದಾಸಪ್ಪಾಜಿಯೂ ಅದೇ ಪಂಗಡಕ್ಕೇ ಸೇರಿದವನಾಗಿದ್ದನು. ದ್ವೇಷದ ಆಳವು ಹೆಚ್ಚುತಾ ಬಂತು. ದೊರೆಗೆ ಹುಚ್ಚೆಂತಲೂ ಲಕ್ಷ್ಮೀವಿಲಾಸದ ಅಮ್ಮನವರು ದೌಲತ್ತುಮಾಡಬೇಕೆಂತಲೂ ಲಕ್ಷ್ಮೀವಿಲಾಸದವರ ಹೆಸರಿನಿಂದ ಕಲ್‌ಕತ್ತ ಸರ್ಕಾರದವರಿಗೆ ದಾಸಪ್ಪಾಜಿಯು ಲೇಖನಗಳನ್ನು ಬಳಪಿತೂರಿಯಿಂದ ಬರಿಸಿದನಂತೆ. ಈ ಸಂಗತಿ ಲಕ್ಷ್ಮೀವಿಲಾಸದವರಿಗೆ ಗೊತ್ತಾ

ಗಿತ್ತೋ ಇಲ್ಲವೋ ಹೇಳಲು ಸಾಧ್ಯವಿಲ್ಲ. ಮೈಸೂರ ರಾಜ್ಯವನ್ನು ೪೪ ಲಕ್ಷ ವರಹಾಕ್ಕೆ ಮಿಟ್ಟಾವಾಗಿ ಕೊಡಿಸಬೇಕೆಂದು ದಾಸಪ್ಪಾಜಿಯು ಇನ್ನೊಂದು ಸಲಹೆಯನ್ನು ಕಳುಹಿಸಿದ್ದನಂತೆ. ಹೀಗೆ ದಾಸಪ್ಪಾಜಿಯು ಸ್ವಪ್ರಯೋಜನ ಪರಾಯಣನಾಗಿದ್ದನೆಂದು ಗೊತ್ತಾಗುವಲ್ಲಿ, ದೊರೆಯು ಹೆಸರನ್ನು ಹಲವು ಬಗೆಯಲ್ಲಿ ಕೆಡಿಸಬೇಕೆಂಬುವುದು ಇವನಿಗೆ ದೊಡ್ಡ ಉದ್ದೇಶವಾಗಿತ್ತು. ಇದನ್ನು ನೆರವೇರಿಸಿಕೊಳ್ಳುವುದಕ್ಕೆ ಲಕ್ಷ್ಮೀವಿಲಾಸದವರ ಹೆಸರಿನ ಹೆಚ್ಚಾದ ತೂಕವು ಸಹಕಾರಿಯಾಗಬಹುದೆಂದು ಊಹಿಸಿ, ಅವರ ಹೆಸರಿನ ಮೇಲೆ ಈ ದಾಸಪ್ಪಾಜಿಯು ಪಿತೂರಿಯಿಂದ ಕಾಗದವನ್ನು ಬರೆಯಿಸಿರಬಹುದೆಂದು ತಿಳಿಯುವುದಕ್ಕೆ ಸಾಕಾದಷ್ಟು ಕಾರಣವಿದೆ.

ಅದುವರೆಗೆ ದೊರೆಯು ದೌಲತ್ತನ್ನು ಕಂಪನಿ ಸರ್ಕಾರದವರು ತಮ್ಮ ವಶಕ್ಕೆ ತೆಗೆದುಕೊಂಡರು. ಲಕ್ಷ್ಮೀವಿಲಾಸದವರ ಹೆಸರಿನಿಂದ ಕಲ್ಕತ್ತೆಗೆ ಹೋಗಿದ್ದ ಲೇಖನದ ಸಂಗತಿಯು ದೊರೆಗೆ ತಿಳಿಯಿತು. ತಮ್ಮ ಹೆಸರನ್ನು ಕೆಡಿಸುವುದಕ್ಕೆ ಆ ಕಾಗದವು ಕಾರಣವಾಯಿತೆಂದು ಊಹಿಸಿಕೊಂಡು ದೊರೆಯು ಲಕ್ಷ್ಮೀವಿಲಾಸದವರಲ್ಲಿ ಅಧಿಕವಾದ ದ್ವೇಷವನ್ನು ಸಾಧಿಸುತಾ ಬಂದರು. ಲಕ್ಷ್ಮೀವಿಲಾಸಕ್ಕೆ

ಹೋಗುವ ಒಳಬಾಗಿಲಿಗೆ ಗೋಡೆಯನ್ನು ಹಾಕಿಸಿ ಆ ತೊ ಟ್ಟಿಯನ್ನೇ ಬೇರೆಮಾಡಿದರು. ಕಥೆಗಳಲ್ಲಿ ದೊರೆಗೆ ಹೆಂಡ ತಿಯಮೇಲೆ ಕೋಪ ಬಂದರೆ, ಅವಳಿಗೆ ಕಡೇತೊಟ್ಟಿಗೆ ಹಾಕಿ ಕಗ್ಗಲರಾಗಿ ಮುಗ್ಗಲ ಹುರಳಿಯನ್ನು ಹಾಕಿಸುತಾ ಇದ್ದನೆಂದು ಹೇಳುವುದು ವಾಡಿಕೆಯಾಗಿದೆ. ಲಕ್ಷ್ಮೀವಿಲಾಸ ದವರ ಭಾಗ್ಯಕ್ಕೆ ಈ ಕಥೆಯ ಮಾತೆಲ್ಲಾ ನಿಜವಾಯಿತು. ಇವರು ತಮಗೆ ಆಪ್ತರಾದ ಸ್ತ್ರೀಗಳೊಡನೆ— ಶಿವ ಶಿವಾ! ಈ ಸ್ತ್ರೀಜನ್ಮದ ಬಾಳು ಕೆಟ್ಟದು. ಹೆತ್ತ ತಾಯಿ ತಂದೆ ಗಳನ್ನೂ ಒಡಹುಟ್ಟದವರನ್ನೂ ತೌರುಮನೆಯ ಸಕಲ ಸೌಭಾಗ್ಯವನ್ನೂ ಬಿಟ್ಟು, ಕೈಹಿಡಿದ ಗಂಡನೇ ಮಾತನಾಡ ತಕ್ಕ ದೇವರೆಂದು ತಿಳಿದು ಬಂದೆನಲ್ಲಾ! ಮಾತಾಪಿತೃಗಳ ಶರೀರದಲ್ಲಿ ಮಕ್ಕಳು ಒಂದು ಭಾಗವಲ್ಲವೆ! ಅಂಥಾ ಮ ಕ್ಕಳನ್ನು ತೊರೆದುಕೊಂಡು ಕರುಳನ್ನು ಕಿತ್ತು ಮೇಲೆಹಾಕಿ ಸಂರಕ್ಷಣೇ ಮಾಡೆಂದು ಕೊಟ್ಟದ್ದಕ್ಕೆ ಈಗತಿ ಆಗ ಬಹುದೆ? ಗಂಡನು ಬಾಳಿಸದೆ ಮುನಿಸಿಕೊಂಡರೆ ಸ್ತ್ರೀಗೆ ಇನ್ನೆಷ್ಟು ಭಾಗ್ಯವಿದ್ದರೂ ಪ್ರಯೋಜನವಿಲ್ಲ. ವಿವಾಹವಾ ಗುವುದಕ್ಕೆ ವಂಶ ಅಂಕುರಿಸಬೇಕೆಂಬುವುದೇ ಮುಖ್ಯವಾದ ಕೋರಿಕೆ. ಸಂಸ್ಥಾನ ನಡೆಯುವುದಕ್ಕೆ ಒಂದು ಕೊನೆ ಯೂ ಇಲ್ಲವಾಯಿತು. ಅಗ್ನಿಸಾಕ್ಷಿಯಾಗಿ ಬಂಧ ಹೆಂಡ

ತಿಯ ಕೈಯನ್ನು ತಿರಸ್ಕರಿಸಿದಮೇಲೆ, ಇನ್ನು ಯಾರಿಗೆ ಎಷ್ಟು ಮಕ್ಕಳಾದರೂ ಪ್ರಯೋಜನವೇನು ? ಮೈಸೂರ ಪ್ರಜೆಗಳ ದೌರ್ಭಾಗ್ಯವನ್ನು ಎಷ್ಟು ವರ್ಣಿಸಲಿ ! ದುಷ್ಟರ ಪ್ರಾಬಲ್ಯದಲ್ಲಿ ಶಿಷ್ಟರ ಬಾಳು ಹೀಗೆಯೇ ಸರಿ. ದಂಪತಿಗಳ ವಿಯೋಗದಿಂದ ಕೂಡಿದ ಮಹದೈಶ್ವರ್ಯಕ್ಕಿಂತಲೂ ಅನುಕೂಲವಾದ ದಾಂಪತ್ಯವುಳ್ಳ ಬಡತನವು ಮೇಲು. ಸಾಧಾರಣ ಜನರಾದರೆ ಯಾರಾದರೂ ಬುದ್ಧಿಯನ್ನು ಹೇಳಿ ಸನ್ಮಾರ್ಗವನ್ನು ತೋರಿಸಬಹುದು; ದೊರೆಗಳಲ್ಲಿ ವಿವೇಕ ಕೆಟ್ಟರೆ, ಅದು ಚಿಕಿತ್ಸೆಯಿಲ್ಲದ ರೋಗವಾಗುವುದು. ಜನ್ಮಾಂತರದಲ್ಲಿ ನಾನು ಯಾವ ಪಾಪವನ್ನು ಮಾಡಿದ್ದೆನೋ ಅದರ ಫಲವನ್ನು ಈಗ ಅನುಭವಿಸುತೇನೆ. ನಾನು ಹೆಂಗಸು, ಸಹಾಯ ರಹಿತಳು. ಇನ್ನು ಯಾರಮೇಲೆಶಾನೆ ದೋಷಾರೋಪಣೆಮಾಡಿ ಪ್ರಯೋಜನವೇನು ? ಹೆಂಗಸನ್ನು ಎಷ್ಟರಮಟ್ಟಿಗೆ ದುಃಖಪಡಿಸಿದರೆ ಅಷ್ಟರಮಟ್ಟಿಗೆ ಸ್ತ್ರೀವಧೆ ಮಾಡಿದಂತಾಗುತ್ತೆ. ವಿಧಿಯನ್ನು ಮೀರಿದವರು ಯಾರು ? ಎಂದು ಆಗಾಗ್ಗೆ ಬಹುವಾಗಿ ಶೋಕಿಸುತಿದ್ದರು. ಆಶಾಭಂಗವಾದಷ್ಟೂ ಅಮ್ಮನವರ ಮನಸ್ಸು ಅಧಿಕವಾಗಿ ರೋಸಿ ಹೋಯಿತು. ಇವರು ಮೂರು ಹಣದ ಬಿಳೀಸೀರೆಯನ್ನುಟ್ಟು, ರತ್ನಪಡಿ ಒಡವೆಗಳನ್ನೂ ಬಂಗಾರದ ಒಡವೆಗ

ಳನ್ನೂ ತೆಗೆದಿಟ್ಟು, ವಿಭೂತಿ ರುದ್ರಾಕ್ಷಿಯನ್ನು ಧರಿಸಿ, ಸುವಾಸಿಯ ಲಾಂಛನವಾಗಿ ಸ್ವಲ್ಪ ಕುಂಕುಮವನ್ನು ವಿಭೂತಿಯಮೇಲೆ ಧರಿಸಿ, ವೇದಾಂತ ಗ್ರಂಥಗಳನ್ನು ಓದುತಾ ಜ್ಞಾನಯೋಗ ರಾಜಯೋಗದಲ್ಲಿ ಪರಿಶ್ರಮವನ್ನು ಹೊಂದಿ ಯೋಗಿನಿಯಂತೆ ಕಾಲಹರಣವನ್ನು ಮಾಡುತಿದ್ದರು. ಎಲ್ಲಾ ಭಾಗದಲ್ಲಿಯೂ ಇವರ ಚರಿತ್ರೆಯು ಶ್ಲಾಘ್ಯವಾಗಿತ್ತೆಯಲ್ಲದೆ ಮತ್ತೆ ಯಾರೂ ಮುಚ್ಚಿದಬಾಯಿಯೊಳಗೂ ತಮ್ಮ ನಾಲಗೆಯನ್ನು ಅಲ್ಲಾಡಿಸುವಹಾಗಿರಲಿಲ್ಲ. ಏಕಭುಕ್ತ, ಫಲಾಹಾರ, ಕ್ಷೀರಾಹಾರ, ಉಪವಾಸ ಮೊದಲಾದ್ದರಲ್ಲಿ ದೇಹ ಕ್ಷಯಿಸಿಹೋಯಿತು. ಕೋಮಲವಾದ ಶರೀರವೆಲ್ಲಾ ಕೃಶವಾಯಿತು. ಹೀಗೆಯೇ ಅನೇಕ ವರುಷ ಜರಗಿತು. ಸತ್ಕುಲಪ್ರಸೂತಿಯಾಗಿಯೂ ವೀರಪತ್ನಿಯಾಗಿಯೂ ಇದ್ದಕಾರಣ ಮನಸ್ಸು ಲೇಶವೂ ಚಾಂಚಲ್ಯವನ್ನು ಹೊಂದದೆ ಏಕರೀತಿಯಾಗಿತ್ತು.

ಕಾಲಗತಿಯನ್ನು ಕಂಡವರು ಯಾರು? ಯಾವಾಗ ಏನು ನಡೆಯುವುದೋ ಹೇಳಲು ಸಾಧ್ಯವಿಲ್ಲ. ಇವರ ವಿಷಯದಲ್ಲಿ ದೊರೆಯ ಮನಸ್ಸು ಕರಗುವುದಕ್ಕೆ ಒಂದು ಕಾರಣ ಉಂಟಾಯಿತು. ನಮ್ಮ ಮಾತಾಮಹಿಯ ತಂಗಿ ಎಂದರೆ ಚಿಕ್ಕ ಹೆತ್ತಮ್ಮನು ದೊರೆಯ ಬಂಗಾರದ ಕು

ಮಾರಿಯಿಂದ ಕೇಳಿ ನೋಡಿದ ಸಂಗತಿ ಎಂದು ಹೇಳಿದ ಮಾತನ್ನು ನಾನು ಕಿವಿಯಾರ ಕೇಳಿದೇನೆ. ಅದನ್ನು ಇಲ್ಲಿ ಬರೆದು ಪ್ರಕಾಶಪಡಿಸುವುದರಿಂದ ಆ ರಾಜದಂಪತಿಗಳ ಗುಣಾತಿಶಯಗಳು ಚೆನ್ನಾಗಿ ವಿಶದವಾಗುವವು. ಇದೂ ಅಲ್ಲದೆ ಲಕ್ಷ್ಮೀವಿಲಾಸದ ಅಮ್ಮನವರಲ್ಲಿ ದೊರೆಗಳಿಗಿದ್ದ ಕೋಪ, ಅದು ಅಡಗಿ ಅಭಿಮಾನಕ್ಕೆ ತಿರುಗಿದ ರೀತಿ, ಅಂಥಾ ಅಭಿಮಾನದ ಆಧಿಕ್ಯಕ್ಕೆ ಶಾಸ್ತ್ರಿಗಳು ಉದಾಸೀನರಾಗಿದ್ದರಂದು ಅವರಮೇಲೆ ಹುಟ್ಟಿದ ರಾಜಾಗ್ರಹ, ಇದಕ್ಕಾಗಿ ಶಾಸ್ತ್ರಿಗಳು ದೇಶವನ್ನೇ ಬಿಟ್ಟು ಹೊರಟುಹೋಗುವ ಮಟ್ಟಿನ ಚಿತ್ತವೃತ್ತಿ, ಇದೆಲ್ಲಾ ಗೊತ್ತಾಗಬೇಕಾದರೆ ಈ ಸಂಗತಿ ಪ್ರಕಾಶಕ್ಕೆ ಬರತಕ್ಕದ್ದು ಅಗತ್ಯವೆಂದು ಕಂಡು ಬಂದಿದೆ.

ಬಂಗಾರದ ಸಂಬಂಧದಲ್ಲಿ ದೊರೆಯು ಮುಟ್ಟಿಕೊಂಡ ಒಬ್ಬ ಅಮ್ಮನವರಿಗೆ ಒಬ್ಬ ಹೆಂಣುಮಗಳು ಇದ್ದಳು. ಈ ಮಗುವು ಬಹು ಲಕ್ಷಣವಾಗಿತ್ತು, ಮತ್ತು ದೊರೆಯ ಅನುರೂಪವಾಗಿತ್ತು. ವಿವಾಹ ಮೊದಲಾದ್ದೆಲ್ಲಾ ಆದ ತರುವಾಯ ಈಕೆಯು ಗರ್ಭಿಣಿಯಾದಳು. ದಿನವಹಿ ದೊರೆಯು ಮಗಳನ್ನು ನಾಲ್ಕುಸಾರಿ ನೋಡುತಾ ಇದ್ದರು. ಮಗಳಲ್ಲಿದ್ದ ಅಭಿಮಾನಕ್ಕೆ ಸಾಟಿಯೇ ಇರ

ಲಿಲ್ಲ. ಗರ್ಭಿಣಿಗೆ ನಾಲ್ಕು ತಿಂಗಳು ತುಂಬಿತು. ಐದನೇ ತಿಂಗಳು ನಡೆಯುತಾ ಇತ್ತು. ವಾಡಿಕೇ ಪ್ರಕಾರ ಬಳೆದೊಡಿಸುವ ಪ್ರಸ್ತುತವನ್ನು ಬೆಳಿಸಲು ಬೇಕಾದ ಏರ್ಪಾಡೆಲ್ಲಾ ಆಯಿತು. ಆಗ ಮಧ್ಯಕಾಲದಲ್ಲಿ ಒಂದು ದಿನ ತಂದೆಯು ಮಗಳನ್ನು ಕುರಿತು,

ದೊರೆ—ಅಮ್ಮ ನೀನು ದೇವರ ಕಟಾಕ್ಷದಿಂದ ಗರ್ಭಿಣಿಯಾಗಿದ್ದೀಯೆ. ನೀನು ಏನನ್ನು ಬಯಸಿದ್ದೀಯೆ? ಸಂಕೋಚವಿಲ್ಲದೆ ಹೇಳು, ಬೇಕಾದ್ದನ್ನು ತರಿಸಿ ಕೊಡುತೇನೆ.

ಮಗಳು—ಹಾಗಾದರೆ ಅಪ್ಪಾಜಿ ನಾನು ಕೇಳಿದ್ದನ್ನು ತರಿಸಿ ಕೊಡುತೀರ?

ದೊರೆ—ಖಂಡಿತವಾಗಿಯೂ ತರಿಸಿಕೊಡುತೇನೆ. ಈ ಮಾತಿಗೆ ತಪ್ಪುವುದಿಲ್ಲ.

ಮಗಳು—ಅಪ್ಪಾಜಿ, ನವರತ್ನವೂ ಕೆತ್ತಿರುವ ಕೈಬಳೆಯನ್ನು ಇಟ್ಟುಕೊಳ್ಳಬೇಕೆಂದು ನನಗೆ ಆಸೆ ಇದೆ.

ದೊರೆ—ನಮ್ಮ ಬೊಕ್ಕಸವನ್ನು ನೋಡಿದ್ದೀಯಷ್ಟೆ. ಅದರಲ್ಲಿ ಬೇಕಾದ ಬಳೆಯನ್ನು ತೆಗೆದುಕೊ.

ಮಗಳು—ಖಾಸ ಬೊಕ್ಕಸದಲ್ಲಿ ನನಗೆ ಬೇಕಾದ ಬಳೆ ಯಾವುದೂ ಇಲ್ಲ.

ದೊರೆ—ಹಾಗೆ ಇಲ್ಲದಿದ್ದರೆ ಹೊಸದಾಗಿ ಮಾಡಿಸಿ ಕೊಡುತ್ತೇನೆ.

ಮಗಳು—ಹೊಸದಾಗಿ ಮಾಡಿಸಿದ್ದು ನನಗೆ ಬೇಡ. ಹಿಂದಕ್ಕೆ ಮುತ್ತೈದೆಯರು ಇಟ್ಟದ್ದು ನನಗೆ ಬೇಕು.

ದೊರೆ—ಅಂಥಾದ್ದು ಯಾರಲ್ಲಿದೆ? ಹೇಳು ತರಿಸುತ್ತೇನೆ.

ಮಗಳು—ಅಪ್ಪಾಜಿ, ಕೋಪಿಸಿಕೊಳ್ಳುತ್ತೀರೇನೊ.

ದೊರೆ—ಇಲ್ಲ, ಹೇಳು.

ಮಗಳು—ಕೋಪಿಸಿಕೊಳ್ಳುವುದಿಲ್ಲವೆಂದು ನನ್ನ ಕೈಮುಟ್ಟಿ ಹೇಳಿ, ಅಪ್ಪಾಜಿ.

ದೊರೆ—ಬಸರಿಯರನ್ನು ಮುಟ್ಟಿ ಆಣೆ ಇಡಬಾರದಮ್ಮ.

ಮಗಳು—ನಾನು ಹೇಳಿದರೆ, ತಾವು ಕೋಪಿಸಿಕೊಳ್ಳದೆ ಇರುವುದೂ ಇಲ್ಲ, ಬಳೆಯನ್ನು ನನಗೆ ತರಿಸಿಕೊಡುವುದೂ ಇಲ್ಲ. ಬಳೇ ಆಸೆ ಯಾಕೆಬಂತು.

ದೊರೆ—ನೀನು ಪೇಚಾಡಬೇಡ. ನನಗೆ ಸಂಕಟವಾಗುತ್ತೆ. ಎಲ್ಲಿದ್ದರೂ ತರಿಸಿಕೊಡುತ್ತೇನೆ. ಹೇಳು.

ಮಗಳು—ಲಕ್ಷ್ಮೀವಿಲಾಸದ ಅಮ್ಮಯ್ಯನಲ್ಲಿದೆ. ತರಿಸಿಕೊಡಿ.

ಈ ಮಾತು ಕಿವಿಯಮೇಲೆ ಬಿದ್ದ ಕ್ಷಣದಲ್ಲಿಯೇ ದೊರೆಯು ಆ ಸಂಗತಿಯನ್ನು ಅಲ್ಲಿಗೆ ಬಿಟ್ಟು ಯಾವುದೋ ಒಂದು ವ್ಯಾಜದಮೇಲೆ ಮಗಳ ಸಮೀಪದಿಂದ ಆ

ಚೆಗೆ ಹೊರಟುಹೋದರು. ಆದರೆ ಮಗಳು ಆಡಿದ ಮಾತು ಮನಸ್ಸಿನಲ್ಲಿ ನಾಟಿತು. ಅದನ್ನು ನೆರವೇರಿಸುವುದಕ್ಕೆ ಮಾರ್ಗವಿಲ್ಲವಲ್ಲಾ ಎಂಬ ಕೊರತೆ ಹತ್ತಿತು. ಲಕ್ಷ್ಮೀವಿಲಾಸವೆಂಬ ಮಾತು ಕಿವಿಗೆ ಬಿದ್ದಕೂಡಲೆ ಹಿಂದಿನ ಅಗ್ರಹಾರವೆಲ್ಲಾ ಹೊಸದಾಗುವಹಾಗಿರುವಲ್ಲಿ, ಅಂಥಾ ರಾಣಿವಾಸಕ್ಕೆ ಹೇಳಿಕಳುಹಿಸುವುದು ಹೇಗೆ, ಬಳೆಯನ್ನು ತರಿಸುವುದು ಹೇಗೆ? ಇದು ಅಸಾಧ್ಯವಾಗಿ ಕಂಡಿತು. ಆದರೆ ತನ್ನ ಮುದ್ದಿನ ಮಗಳ ಕೋರಿಕೆಯನ್ನು ನೆರವೇರಿಸಬೇಕಾದ್ದು ಅವಶ್ಯಕವಾಗಿತ್ತು. ಅದನ್ನು ಮರೆಯುವುದಕ್ಕೆ ಆಗುವುದಿಲ್ಲ. ಆಡುವುದಕ್ಕೆ ಬಾಯಿಬಾರದು. ಸಹಿಸುವುದಕ್ಕೆ ಮನಸ್ಸು ಒಪ್ಪದು. ಹೀಗಾಯಿತು. ಅತ್ತ ಮಗಳು ಬಯಕೆ ಕೈಗೂಡದ್ದರಿಂದ ಮನಸ್ಸನ್ನು ಸಂಕೋಚ ಮಾಡಿಕೊಂಡಳು. ಈಕೆಯ ಮುಖದ ಕಾಂತಿ ಕಡಮೆಯಾಯಿತು. ದೇಹವೂ ಇತರರ ಕಂಣಿಗೆ ಕಾಣುವಮಟ್ಟಿಗೆ ಕೃಶವಾಗುತಾಬಂತು. ಮಗಳು ಕಂಗೆಟ್ಟದ್ದನ್ನು ಕಂಡು ದೊರೆಯು, ಕೆಲವು ಕಾಲ ಕಳೆದಮೇಲೆ ಒಂದು ದಿವಸ,

ದೊರೆ—ಅಮ್ಮ ನಿನ್ನ ಬಯಕೆ ತೀರದೇ ಹೋದ್ದು ನನ್ನ ಮನಸ್ಸಿಗೆ ಬಹಳ ಸಂಕಟವನ್ನುಂಟುಮಾಡುತಾ ಇದೆ.

● ಬಳೆ ಇರುವಕಡೆ ನೀನೇ ಹೋಗಿ ಇಸುಕೋ.

ಮಗಳು—ಇದು ಅಷ್ಟು ಸುಲಭವಾದ ಕೆಲಸವಲ್ಲ ಅಪ್ಪಾಜಿ. ದೊಡ್ಡಮ್ಮಯ್ಯ ಆ ಬಳೆಯನ್ನು ನನಗೆ ನಾನು ಕೇಳಿದಮಾತ್ರಕ್ಕೇ ಕೊಡಲೂ ಆರರು. ಒಡವೆಯು ಸಾಧಾರಣವಾದ್ದೂ ಅಲ್ಲ.

ದೊರೆ—ಅದು ಎಂಥಾ ಬಳೆ? ನಾನೇ ಮಾಡಿಸಿದ್ದಲ್ಲವೆ? ನಮ್ಮ ಅರಮನೇದಲ್ಲವೆ? ಈಗ ಅದಕ್ಕಿಂತಲೂ ಉತ್ತಮವಾದ್ದನ್ನು ಮಾಡಿಸಲಾರೆನೆ?

ಮಗಳು—ಆ ಬಳೆ ಅರಮನೆಯಲ್ಲಿ ಮಾಡಿಸಿದ್ದಲ್ಲ. ದಿವಾನ ಪೂರ್ಣಯ್ಯನವರು ಯಾವುದೋ ಒಂದು ವಿಭವ ಕಾಲದಲ್ಲಿ ಹಸೇಮೇಲೆ ಕೂತಿರುವಾಗ್ಗೆ ದೊಡ್ಡ ಅಮ್ಮಯ್ಯನಿಗೆ ತಂದು ಇಡಿಸಿದ್ದು. ಅದು ಒಳ್ಳೆಯದಾಗಲಿ, ಕೆಟ್ಟದಾಗಲಿ, ಅದನ್ನು ನಾನು ಎರಡು ದಿವಸದವುಟ್ಟಿಗಾದರೂ ಇಟ್ಟುಕೊಳ್ಳಬೇಕು. ತಮ್ಮ ಸವಾರಿಯೇ ದಯಮಾಡಿಸಿ ಕೊಡಿಸಬೇಕು.

ದೊರೆ—(ಮನಸ್ಸಿನಲ್ಲಿ ಬಹಳ ಕಳವಳಗೊಂಡು) ನಿನ್ನ ಮನಸ್ಸು ಸಂತೋಷವಾಗುವುದಕ್ಕೆ ನೀನು ಹೇಳಿದ ಹಾಗೆ ನಾನು ಕೇಳಬೇಕಾಗಿ ಬಂತು. ನನ್ನ ಪ್ರತಿಜ್ಞೆಯನ್ನೆಲ್ಲಾ ಇಂದಿಗೆ ನಿನಗೋಸ್ಕರ ಬಿಡಬೇಕಾಗಿ ಬಂತು. ನಿನ್ನ ಹಿಂದೆ ನಾನೂ ಬಂದು ಆ ತೊ

ಟ್ಟೆಯ ಬಾಗಿಲಲ್ಲಿ ನಿಂತುಕೊಳ್ಳುತೇನೆ. ನೀನು ಒಳಕ್ಕೆ ಹೋಗಿ ಬಳೆಯನ್ನು ಕೇಳಿ ಇಸುಕೊಂಡುಬಾ.

ಮಗಳು—ಬುದ್ಧಿ, ಹಾಗೆ ಆಗುವುದಿಲ್ಲ, ನನ್ನ ಕೈ ಹಿಡಿದು ತಾವೇ ಕರೆದುಕೊಂಡು ಹೋಗಬೇಕು. ಆ ತೊಟ್ಟಿಯೊಳಕ್ಕೆ ಸ್ವಾಮಿಯ ಪಾದವನ್ನು ಮುಂದಿಟ್ಟರೆ ನಾನು ಅದರ ಹಿಂದೆ ಹೆಜ್ಜೆ ಇಡುತೇನೆ.

ದೊರೆ—ಮಕ್ಕಳಿದ್ದವರಿಗೆ ಮಾನವಿಲ್ಲ. ನೀನು ಹೇಳಿದಹಾಗೆಯೇ ಆಗಲಮ್ಮ.

ಆಗ ಸಮೀಪದಲ್ಲಿ ನಿಂತಿದ್ದ ರಾಣಿವಾಸದವರಲ್ಲಿ ಒಬ್ಬರು ಕೂಡಲೆ ಅಡ್ಡಬಿದ್ದು—ಮಹಾಸ್ವಾಮಿ, ಹಾಗೆ ಚಿತ್ತಕ್ಕೆ ಬರಕೂಡದು. ಮಕ್ಕಳಿದ್ದವರಿಗೇ ಎಲ್ಲಾ ಮಾನವೂ ಉಂಟಾಗುವುದು. ಮಕ್ಕಳಮೇಲಿನ ಪ್ರೀತಿಗಾಗಿ ಮನಸ್ಸಿನ ಕಾಠಿಣ್ಯವನ್ನು ಕಡಮೆಮಾಡಿಮಾಡಿ ಹೃದಯವು ಕೇವಲ ಮೃದುವಾಗುವುದು. ಇತರರು ಕಷ್ಟಪಡುವುದನ್ನು ಕಂಡಾಗಲೆಲ್ಲಾ ತಮ್ಮ ಮಕ್ಕಳ ಜ್ಞಾಪಕ ಹೇಗೆಹೇಗೆಯೋ ಬಂದು ಆ ಮೃದು ಹೃದಯವು ಇತರರಿಗೋಸ್ಕರ ಮರುಗುವುದು. ಕೈಲಾದವರು ಸಾಧ್ಯವಾದಮಟ್ಟಿಗೆ ಕಷ್ಟನಿವಾರಣೆ ಮಾಡುವರು. ಕೈಲಾಗದವರು ಮನಸ್ಸಿನೊಳಗಾದರೂ ಪೇಚಾಡುವರು. ಹೀಗೆ ಪರೋಪಕಾರಮಾಡುವ

ಹೃದಯವನ್ನುಳ್ಳ ಪುಣ್ಯಾತ್ಮರಿಗೆ ಮಾನವಿಲ್ಲವೇ ಬುದ್ಧಿ? ದೇವರು ಕೂಡ ಇಂಥವರಿಗೆ ಮಾನವನ್ನು ಕೊಡುತಾನಲ್ಲಾ, ಎಂದು ಅರಿಕೆ ಮಾಡಿದರು.

ಈ ಸಮಯದಲ್ಲಿ ಗೊರೆಯ ಮನಸ್ಸು ಒಂದು ಪಕ್ಷಕ್ಕೆ ಇಳಿಯಿತು. ಲಕ್ಷ್ಮೀವಿಲಾಸದ ಅಮ್ಮನವರ ಸುಗುಣಗಳೆಲ್ಲಾ ಒಂದೊಂದಾಗಿ ಜ್ಞಾಪಕಕ್ಕೆ ಬಂದವು ಈಚೆಗೆ ದಾಸಪ್ಪಾಜಿ ಮೊದಲಾದ ವಂಚಕರು ಮಾಡಿದ ಒಳತಂತ್ರವೂ ಜ್ಞಾಪಕಕ್ಕೆ ಬಂತು. ಈ ತುಂಟರ ದೆಸೆಯಿಂದ ಹೀಗೆ ವಿಪರೀತವಾಯಿತೇ ಹೊರತು ಯಾವಾಗಲೂ ವೈರಾಗ್ಯದಲ್ಲಿಯೇ ಬುದ್ಧಿಯುಳ್ಳ ಮತ್ತು ಇತರ ಜನಗೋಷ್ಟಿಗೆ ಮಾರ್ಗವಿಲ್ಲದೆ ರಾಣಿವಾಸದಲ್ಲಿಯೇ ಇರುವ ಲಕ್ಷ್ಮೀವಿಲಾಸದವರಿಂದ ಅಪರಾಧವೇನೂ ಇಲ್ಲವೆಂದು ಚಿತ್ತಕ್ಕೆ ತೋರುತಾ ಬಂತು. ಲಕ್ಷ್ಮೀವಿಲಾಸದ ತೊಟ್ಟಿಗೆ ಹೋಗುವ ಒಳಬಾಗಲಿಗೆ ಹಾಕಿಸಿರತಕ್ಕ ಗೋಡೆಯನ್ನು ಕೀಳಿಸಬೇಕೆಂದು ಅಪ್ಪಣೆಯಾಯಿತು. ಲಕ್ಷ್ಮೀವಿಲಾಸದ ಅಮ್ಮನವರಲ್ಲಿ ರಾಣಿವಾಸದವರೇ ಮೊದಲುಮಾಡಿಕೊಂಡು ಉದ್ಯೋಗಸ್ಥರು, ಸೇವಕರು, ಪ್ರಜೆಗಳು, ಎಲ್ಲರಿಗೂ ಅಧಿಕವಾದ ಭಕ್ತಿ ಇತ್ತು. ಆಗ ನಡೆದ ಸಂದರ್ಭವನ್ನು ಕಂಡು ದೊರೆಯ ಕೋಪವು ತಣ್ಣಗಾಯಿತಲ್ಲಾ ಎಂಬ ಸಂ

ಕೋಪದಿಂದ ಆ ಅಡ್ಡಗೋಡೆಯನ್ನು ಒಂದು ನಿಮಿಷಕ್ಕೆ ಕಿತ್ತುಹಾಕಿದರು. ಅನೇಕ ವರುಷಗಳಿಂದ ಹಾಕಿ ಕೀಲ್ಸೈಸಿ ಹೋಗಿದ್ದ ಕದವನ್ನು ಬಲವಂತವಾಗಿ ತೆಗೆದರು.

ಅತ್ತ ಲಕ್ಷ್ಮೀವಿಲಾಸದ ತೊಟ್ಟಿಯ ದೇವರ ಮನೆಯಲ್ಲಿ ಕೃಷ್ಣಾಜಿನವನ್ನು ಹಾಸಿಕೊಂಡು ಕೂತು ದೇವತಾರ್ಚನೆಯೆಲ್ಲಾ ಮುಗಿದ ತರುವಾಯ ಗೀತಾ ಪಾರಾಯಣವನ್ನು ಮಾಡುತಾ ಕೂತಿದ್ದ ಅಮ್ಮನವರಿಗೆ ಈ ಬಾಗಿಲನ್ನು ತೆಗೆಯುತಾ ಇರುವ ಸಂಗತಿಯನ್ನು ದಾದಿಯರು ಬಂದು ತಿಳಿಸಿದರು. ಅಮ್ಮನವರು ಉದಾಸೀನರಾಗಿ ಸುಮ್ಮನಿದ್ದರು. ಆಕೂಡಲೆ ಇನ್ನೊಬ್ಬ ದಾದಿಯು ಓಡಿಬಂದು—ಬುದ್ಧಿ, ಚಿಕ್ಕಮ್ಮಣ್ಣಿಯವರನ್ನೂ ಕರೆದುಕೊಂಡು ಖಾಸಸವಾರಿ ಈ ತೊಟ್ಟಿಯ ಕಡೆಗೆ ದಯಮಾಡುತಾ ಇದೆ, ಎಂದು ಅರಿಕೇಮಾಡಿದಳು. ಕೇವಲ ಶಾಂತಮೂರ್ತಿಯಾದ ಅಮ್ಮನವರ ಮನಸ್ಸಿಗೆ ಬಹಳವಾಗಿ ವಿಕಲ್ಪ ತೋರಿತು. ನನಗೆ ಇನ್ನೇನು ಶಿಕ್ಷೆ ಮಾಡುವುದಕ್ಕೆ ಬರುತಾರೊ ಅರಿಯೆ; ಹಾಗಿದ್ದರೆ ಗರ್ಭಿಣಿಯಾದ ಹೆಂಡತಿಮಗಳನ್ನು ಸಂಗಡ ಕರೆದುತರಲು ಕಾರಣವಿಲ್ಲ, ಏನುಕಾರಣ ಸವಾರಿ ಈಕಡೆ ಬರುವುದೋ ತೋರಲಿಲ್ಲ, ಎಂದು ಅಮ್ಮನವರ ಮನಸ್ಸು ಕಳವಳಗೊಂಡಿತು. ಅಷ್ಟರಲ್ಲಿ ದೊರೆ

ಯು ಒಳಬಾಗಿಲ ಪೊಸಲಿನ ಹೊರಗಡೆ ನಿಂತುಕೊಂಡರು. ರಾಜಪುತ್ರಿಯು ಪೊಸಲಿನ ಒಳಗಡೆ ನಿಂತುಕೊಂಡರು. ದೊರೆಯು—ನಾನು ಇಲ್ಲಿ ನಿಂತಿರುತೇನೆ, ನೀನು ಒಳಕ್ಕೆಹೋಗಿ ಬಳೆಯನ್ನು ಕೇಳಿ ಇಸುಕೊಂಡು ಬಾ ಎಂದು ಹೇಳಿದರು. ಅದಕ್ಕೆ ರಾಜಪುತ್ರಿಯು—ಹಾಗೆ ಆಗದು, ಸವಾರಿಯು ದಯಮಾಡಬೇಕು, ಎಂದರು. ಆಗ ರಾಜರು ಮಗಳ ಕೈಯನ್ನು ಹಿಡಿದುಕೊಂಡು ತೊಟ್ಟಿಯೊಳಕ್ಕೆ ದಯಮಾಡಿದರು. ಇದನ್ನು ಕೇಳಿ ಪುಟ್ಟ ಅಮ್ಮನವರು ಪಾರಾಯಣದ ಪುಸ್ತಕವನ್ನು ಕೆಳಗೆ ಇರಿಸಿ ತೊಟ್ಟಿಯ ಹಜಾರಕ್ಕೆ ಬಂದರು. ಇದನ್ನು ಕಂಡು ದೊರೆಯು ಮಗಳ ಮುಖವನ್ನು ನೋಡಿ ನಿನಗೆ ಬೇಕಾದ ಬಳೆಯನ್ನು ಕೇಳಿ ಇಸುಕೊ, ಎಂದರು. ತಾವೇ ಕೇಳಿ ಅಪ್ಪಾಜಿ, ಎಂದು ಮಗಳು ಹೇಳಿದಳು. ಯಾವಕಾಲಕ್ಕೆ ಏನು ಜರುಗುವುದೋ ಅದಕ್ಕೆ ಯಾವಕಾರಣ ಉಂಟಾಗುವುದೋ ಹೇಳುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಅನೇಕ ವರುಷಗಳಿಂದ ಬಿಟ್ಟು ಹೋಗಿದ್ದ ಆಗ ಸಂಭವಿಸಿತು. ಗಂಡಹೆಂಡರಿಬ್ಬರೂ ಆಗ ಒಬ್ಬರ ಮುಖವನ್ನು ಒಬ್ಬರು ನೋಡಿದರು. ಉಟ್ಟಿದ್ದು ಅಂಚಿಲ್ಲದಂಥಾ ಶುಭ್ರವಾದ ಬಿಳೀಸೀರೆ, ಮೈಗೂ ಹಣೆಗೂ ಧರಿಸಿದ್ದ ವಿಭೂ

ತಿ, ಹಣೆಯಮೇಲೆ ಇಟ್ಟಿದ್ದ ಸಣ್ಣ ಕುಂಕುಮದ ಬಟ್ಟು, ಹಿಂದುಗಡೆಗೆ ಗಂಟುಹಾಕಿ ಚೆನ್ನಾಗಿ ನರೆತು ಕೆದರಿಕೊಂಡಿದ್ದ ತಲೇಕೂದಲು, ಕತ್ತಿನಲ್ಲಿ ಅಂತರಂತರವಾದ ರುದ್ರಾಕ್ಷಿಸರಗಳು, ಅದರ ಮಧ್ಯೆ ಅರಿಸಿನದ ದಾರಕ್ಕೆ ಕಟ್ಟಿದ್ದ ಬಟ್ಟುತಾಳಿ, ಕೈಗೆ ಕಟ್ಟಿದ ರುದ್ರಾಕ್ಷಿಯ ಕೈಕಟ್ಟು, ಕಿವಿಯಲ್ಲಿಟ್ಟಿದ್ದ ಓಲೇಗರಿಯ ಬಿಚ್ಚೋಲೆ, ಅಸ್ತಿಚರ್ಮಮಾತ್ರ ಹತ್ತಿರುವ ಕೃಶವಾದ ದೇಹ, ಒಂದಾನೊಂದು ಕಾಲದಲ್ಲಿ ಎಷ್ಟೋ ಲಕ್ಷಣವಾಗಿದ್ದು ಈಗ ನಿರಸವಾಗಿ ಬಾಡಿ ಸುಕ್ಕುಹಿಡಿದು ಹೋದಮುಖ, ಗುಣಿಗೆ ಇಳಿದು ಹೋಗಿರುವ ಕಂಣುಗಳು, ಇದೆಲ್ಲಾ ಒಟ್ಟಿಗೆ ಧೊರೆಯ ದೃಷ್ಟಿಗೆ ಬಿತ್ತು. ಆಗ ದೊರೆಯು ಪಟ್ಟಮಹಿಷಿಯಾದ ಹೆಂಡತಿಯನ್ನು ಕುರಿತು—ನಿಮ್ಮ ಮಗಳು ಬಸಿರಾಗಿದಾಳೆ, ಯಜಮಾನರಾದ ದಿವಾನ ಪೂರ್ಣಯ್ಯನವರು ನಿಮಗೆ ಹಸೇಮೇಲೆ ಓದಿಸಿದ್ದ ಕೆತ್ತನೇ ಬಳೆಯನ್ನು ಇಟ್ಟುಕೊಳ್ಳಬೇಕೆಂದು ಬಯಸಿದಾಳೆ; ಅದನ್ನು ಕೊಡಿಸಿ, ಎಂದರು. ಆಕೂಡಲೇ ಅಮ್ಮನವರ ಕಣ್ಣಿನಲ್ಲಿ ಪಳಪಳನೆ ನೀರು ಬಂತು. ಹೆಂಡತಿಯ ಸ್ಥಿತಿಯನ್ನು ನೋಡಿ ಅದುವರೆಗೇ ಮನಸ್ಸೆಲ್ಲಾ ಕಲಕಿಹೋಗಿತ್ತು. ಆ ಪಟ್ಟದ ರಾಣಿಯ ಕಣ್ಣಿನಲ್ಲಿ ಕಂಬನಿಗಳು ಬಂದ ಕ್ಷಣದಲ್ಲಿಯೇ ನೃದುಹೃದ

ಯುರಾದ ದೊರೆಯು ಕಣ್ಣಿನಲ್ಲಿಯೂ ನೀರು ತುಂಬಿತು. ಅಮ್ಮನವರು ಗಂಡನ ಪಾದಕ್ಕೆ ನಮಸ್ಕಾರವನ್ನು ಮಾಡಿ, ಪಾದಗಳೆರಡನ್ನೂ ತೊಳೆದು ತನ್ನ ಸೆರಗಿನಿಂದಲೇ ಒರೆಯಿಸಿ ಕಣ್ಣಿಗೆ ಒತ್ತಿಕೊಂಡು, ಗದ್ಗದ ಸ್ವರದಿಂದ—ಬುದ್ಧಿ, ಇಂದಿಗೆ ನನ್ನ ಪಾಪ ಹರಿಯಿತು, ಈ ಜನ್ಮ ಸಾರ್ಥಕವಾಯಿತು, ಎಂದರು. ದೊರೆಯು ಹಿಂದಿನ ಚರಿತ್ರೆಯನ್ನೂ ಸದ್ಗುಣಶೀಲೆಯಾದ ಹೆಂಡತಿಗೆ ತನ್ನಿಂದ ಉಂಟಾದ ಕಷ್ಟವನ್ನೂ ನೆನೆದು ಪಶ್ಚಾತ್ತಾಪದಿಂದ ಹೆಂಡತಿಯ ಕೈಯನ್ನು ಹಿಡಿದು ಯಾವ ಮಾತನ್ನೂ ಆಡದೆ ಸುಮ್ಮನೆ ಮೌನದಿಂದ ಅರೆಗಳಿಗೆ ಸ್ತಂಭೀಭೂತವಾಗಿ ಕೂತುಕೊಂಡರು. ಹಿಂದಿನ ಜ್ಞಾಪಕ ಬರುತಾ ಬಂತು. ಮೂಗಿನೊಳಗೆ ಸ್ವಲ್ಪ ಚುಳ್ಳೆಂದಹಾಗೆ ಆಗಿ ಕಣ್ಣಿನಲ್ಲಿ ನೀರುಬಂದಹಾಗೆ ಆಗುತಾಬಂತು. ಅಮ್ಮನವರ ಕಣ್ಣಿನಲ್ಲಿಯೂ ಧಾರೆಯಾಗಿ ನೀರು ಸುರಿದು ಅತಿ ರೋದನದಿಂದುಂಟಾದ ಬಿಕ್ಕಳಿಕೆ ಆಗಾಗ್ಗೆ ಚೆನ್ನಾಗಿ ಎಲ್ಲರಿಗೂ ಕೇಳುತಾ ಬಂತು. ರಾಜಕುವರಿಯು ದೊಡ್ಡ ತಾಯಿಯನ್ನು ಕಂಡ ಒಡನೆಯೇ ನಮಸ್ಕಾರ ಮಾಡಿ ನಿಂತುಕೊಂಡಳು. ತಾಯಿತಂದೆಗಳ ಸ್ಥಿತಿಯನ್ನು ಕಂಡು ಈಕೆಯ ಕಂಬನಿಗಳು ಮುತ್ತಿನ ಹಾಗೆ ಎರಡು ಕೆನ್ನೆಯಮೇಲೆಯೂ ಹರಿದವು.

ಆಗ ಲಕ್ಷ್ಮೀವಿಲಾಸದ ಅಮ್ಮನವರು ಪುನಃ ದೊರೆಗೆ ನಮಸ್ಕಾರವನ್ನು ಮಾಡಿ ಮಗಳನ್ನು ಬಾಚಿ ತಬ್ಬಿಕೊಂಡು ಆಕೆಗೆ ಬೇಕಾದ ಒಡವೆಯನ್ನೂ ಇನ್ನೂ ಇತರ ಆಭರಣಗಳನ್ನೂ ತರಿಸಿ ಹೆಂಣುಮಗಳಿಗೆ ಇಟ್ಟು ಮಂಗಳ ದ್ರವ್ಯಗಳನ್ನು ಕೊಟ್ಟರು. ಇದರಿಂದ ಅರಮನೆಗೆಲ್ಲಾ ಬಹು ಸಂತೋಷವಾಯಿತು. ಬಂಧುವರ್ಗದ ಅರಸುಗಳೆಲ್ಲಾ ಹರ್ಷಿತರಾದರು. ಆದಿನ ಮೊದಲುಗೊಂಡು ವಿಶ್ವಾಸ ಒಂದೇ ಅಲ್ಲದೆ ದೊರೆಗೆ ಲಕ್ಷ್ಮೀವಿಲಾಸದವರಲ್ಲಿ ಗೌರವವೂ ಸಹಾ ಹೆಚ್ಚಿತು. ಆಕೆಯ ವೈರಾಗ್ಯವನ್ನು ಕಂಡು ಭಕ್ತಿ ಉಂಟಾಯಿತು. ಲಕ್ಷ್ಮೀವಿಲಾಸದ ಅಮ್ಮನವರಿಗೆ ಮೊದಲಿಗಿಂತಲೂ ಹೆಚ್ಚಾಗಿ ಪೂರ್ವದ ಮರ್ಯಾದೆಯೆಲ್ಲಾ ನಡೆಯಲು ಅಪ್ಪಣೆಯಾಯಿತು. ಪ್ರಸ್ತಾಪ ಬಂದಾಗ ದೊರೆಯು—ಲಕ್ಷ್ಮೀವಿಲಾಸದವರು ಮಹಾ ಪತಿವ್ರತೆ, ಅವರ ಸುಕೃತದಿಂದಲೇ ನಮ್ಮ ವೈಭವ ಇಷ್ಟರಮಟ್ಟಿಗೆ ಇದೆ ಎಂದು ಹೇಳುತಿದ್ದರು. ಆಕೆಯು ಮೊದಲು ತಮಗೆ ಹೇಳುತಾ ಇದ್ದ ಎಚ್ಚರಿಕೆ ಎಲ್ಲಾ ನಿಜವಾಯಿತು, ಆಕೆಯ ದೂರದೃಷ್ಟಿಗೂ ಬುದ್ಧಿಗೂ ಸಮಾನವಿಲ್ಲ, ಎಂದು ಹೇಳುತಿದ್ದರು. ಹೀಗಿರುವಲ್ಲಿ, ಲಕ್ಷ್ಮೀವಿಲಾಸದ ಅಮ್ಮನವರಿಗೆ ಅವಸಾನಕಾಲ ಪ್ರಾಪ್ತವಾಗಿ ಅವರು ದೈವಾಧೀನರಾ

ದರು. ಹೆಚ್ಚಿನ ಮರ್ಯಾದೆಯಿಂದ ಇವರ ಅಪರ ಕರ್ಮ ಗಳು ಜರಗಿದವು. ಸ್ಮಶಾನಕ್ಕೆ ಅರಮನೆಯ ವಿಶಿಷ್ಟ ಉದ್ಯೋಗಸ್ಥರೂ ವೈದಿಕರೂ ಬರಬೇಕೆಂದು ದೊರೆಯ ಅಪ್ಪಣೆಯಾಯಿತು. ರಾಮಶಾಸ್ತ್ರಿಗಳು ಪ್ರಾತರನುಷ್ಠಾನ ವನ್ನೆಲ್ಲಾ ಮುಗಿಸಿಕೊಂಡು ಆ ಸ್ಥಳಕ್ಕೆ ಹೋಗುವುದು ಹೊತ್ತಾಯಿತು. ತನ್ನ ಹೊಟ್ಟೆಯ ದುಃಖವನ್ನು ತೀರಿ ಸಿಕೊಳ್ಳಲು ಇಂಥಾ ಸಮಯವನ್ನೇ ಕಾಯುತಾ ಇದ್ದ ತಿಮ್ಮಂಣಶಾಸ್ತ್ರಿಯು ಆ ದುಃಖದ ಸಮಯದಲ್ಲಿ ದೊರೆಯ ಬಳಿ ನಿಂತು—ಮಹಾಸ್ವಾಮಿ, ಎಲ್ಲರೂ ಬಂದಿದಾರೆ, ರಾಮ ಶಾಸ್ತ್ರಿಗಳು ಮಾತ್ರ ಬರಲಿಲ್ಲ ಎಂದು ಹೇಳಿದನು. ಈ ಕ್ಷು ದ್ರದ ಹೊಗೆಯು ಪ್ರಭುವಿಗೆ ಶಾಸ್ತ್ರಿಗಳಲ್ಲಿದ್ದ ಗೌರವವನ್ನೆ ಲ್ಲಾ ನುಂಗಿ—ರಾಮಶಾಸ್ತ್ರಿಗಳು ಯಾಕೆ ಬರಲಿಲ್ಲ? ಬರಬೇ ಕಾಗಿತ್ತು, ಎಂದು ಆಕ್ಷೇಪಣರೂಪವಾಗಿ ಹೇಳುವಮಟ್ಟಿಗೆ ಛಡಾಳಿಸಿತು. ಲಕ್ಷ್ಮೀವಿಲಾಸದ ಅಮ್ಮನವರಲ್ಲಿ ದೊರೆಗೆ ಉಂಟಾದ ಅಭಿಮಾನದ ಆಧಿಕ್ಯವನ್ನೂ ಮೇಲಿನ ಸಂಗತಿ ಯು ವಿಶದಮಾಡುವುದು. ಅಭಿಮಾನ ಹೆಚ್ಚಾದಷ್ಟೂ ಅಮ್ಮ ನವರ ನಿರ್ಯಾಣದಲ್ಲಿ ವ್ಯಥೆಯೂ ಆ ವ್ಯಥೆ ಹೆಚ್ಚಾದಷ್ಟೂ ಶಾಸ್ತ್ರಿಗಳಮೇಲಿನ ಆಗ್ರಹವೂ ಅಧಿಕವಾಯಿತು. ಅಷ್ಟರಲ್ಲಿ ಯೇ ಬಂದ ರಾಮಶಾಸ್ತ್ರಿಗಳಿಗೆ ಈ ಸಂಗತಿ ಗೊತ್ತಾಯಿತು.

ರಾಮಶಾಸ್ತ್ರಿಗಳು ಪ್ರಾತಃಸ್ನಾನಾಹ್ನಿಕಗಳನ್ನು ಮುಗಿಸಿಕೊಳ್ಳದೆ ಹೊರಕ್ಕೆ ಹೊರಡುತಲೇ ಇರಲಿಲ್ಲ. ಬೆಳಗ್ಗೆ ಪಂಚಪಂಚ ಉಷಃಕಾಲಕ್ಕೆ ಎದ್ದು ಚಾಮುಂಡೀ ಬೆಟ್ಟದ ಕಿಬ್ಬೆಕಡೆ ಬಹಿರ್ದೇಶಕ್ಕೆ ಹೋಗುತಾ ಇದ್ದರು. ಹೋಗುವಾಗ್ಗೆ ಸಾಗುಗೆರೆ ನಾರಾಯಣಶಾಸ್ತ್ರಿ, ಸುಬ್ರಹ್ಮಣ್ಯಶಾಸ್ತ್ರಿ, ಇತರ ಶಿಷ್ಯರು ಇವರನ್ನು ಕರೆದುಕೊಂಡು ಹೋಗುತಾ ಇದ್ದರು. ದಾರಿಯಲ್ಲಿ ಹೋಗುವಾಗ್ಗೆ ಶಾಸ್ತ್ರವಿಷಯಕವಾದ ಚರ್ಚೆಯನ್ನು ಶಿಷ್ಯರೊಡನೆ ಮಾಡುತಾ ಇದ್ದರು. ಅವರ ಪಾಠದಲ್ಲಿ ಬಂದ ಸಂಶಯಗಳನ್ನು ಪರಿಹರಿಸುತ್ತಲೂ ಇದ್ದರು. ಶಿಷ್ಯನು ಒಂದು ದೊಡ್ಡ ತಂಬಿಗೆಯನ್ನು ತೆಗೆದುಕೊಂಡು ಹೋಗುವ ಪದ್ಧತಿ ಇತ್ತು. ಬೆಟ್ಟದ ಬಳಿಗೆ ಹೋದ ತರುವಾಯ ಶಿಷ್ಯನನ್ನು ಹಿಂದೆ ಬಿಟ್ಟು ಶಾಸ್ತ್ರಿಗಳು ತಂಬಿಗೆಯನ್ನು ತಾವು ತೆಗೆದುಕೊಂಡು ಹೋಗುತಾ ಇದ್ದರು. ಬಹಿರ್ದೇಶದ ಕೆಲಸಗಳನ್ನೆಲ್ಲಾ ಸಾವಕಾಶವಾಗಿ ತೀರಿಸಿಕೊಂಡು ಹಿಂತಿರುಗಿ ಮನೆಗೆ ಹೋಗಿ ಸ್ನಾನಮಾಡಿ ಸಂಧ್ಯಾವಂದನೆ, ಪಾರಾಯಣ, ದೇವತಾರ್ಚನೆ, ಔಪಾಸನ ಮೊದಲಾದ್ದನ್ನು ಮಾಡುತಾ ಇದ್ದರು. ಅದುವರೆಗೆ ಜಾವಹೊತ್ತು ಆಗುತಾ ಇತ್ತು. ತರುವಾಯ ಕೆಲವು ಶಿಷ್ಯರಿಗೆ ಪಾಠವನ್ನು ಹೇಳಿ ಅರಮನೆಗೆ

ಹೋಗಿ ಅಲ್ಲಿ ದೊರೆಗೆ ನಾಮತೀರ್ಥದ ತೊಟ್ಟಿಯಲ್ಲಿ ಶಿವ ಪೂಜೆ ಮೊದಲಾದ್ದೆಲ್ಲಾ ಆಗಿ ಅವರು ಊಟಕ್ಕೆ ಹೋದ ಮೇಲೆ ಇವರು ಮನೆಗೆ ಬರುತಾ ಇದ್ದರು. ಆಮೇಲೆ ಪುನಃ ಸ್ನಾನವನ್ನು ಮಾಡಿ ಮಾಧ್ಯಾಹ್ನಿಕ, ಬ್ರಹ್ಮಯಜ್ಞ, ವೈಶ್ವದೇವ, ಬಲಿಹರಣ ಮೊದಲಾದ್ದನ್ನು ನೆರವೇರಿಸುತಿದ್ದರು. ಇಷ್ಟೆಲ್ಲಾ ಆಗುವಾಗ್ಗೆ ೨ ಅಥವ ೩ ಗಂಟೆ ಹೊತ್ತು ಆಗುತಾ ಇತ್ತು. ಆಗ ಶಿಷ್ಯರೆಲ್ಲರನ್ನೂ ಕೂರಿಸಿಕೊಂಡು ಊಟಮಾಡುತಾ ಇದ್ದರು. ಸಾವಕಾಶವಾಗಿ ಹೊಟ್ಟೇತುಂಬ ಭೋಜನಮಾಡುತಾ ಇದ್ದರು. ಸಾಯಂಕಾಲಕ್ಕೆ ಸರಿಯಾಗಿ ಸಂಧ್ಯಾವಂದನೆ ಮೊದಲಾದ್ದನ್ನು ಮಾಡಿ ರಾತ್ರೆ ೯—೧೦ ಗಂಟೆಗೆ ಭೋಜನಮಾಡಿ ಮಲಗಿಕೊಳ್ಳುತಾ ಇದ್ದರು. ಈ ಮಧ್ಯಕಾಲದಲ್ಲಿ ಶಿಷ್ಯರಿಗೆ ಪಾಠವನ್ನು ಹೇಳುತಿದ್ದರು. ಯಾವಾಗಲೂ ಗ್ರಂಥ ವ್ಯಾಸಂಗ ಮಾಡುತಾ ಇದ್ದರು.

ಒಂದಾನೊಂದು ದಿವಸ ಇನ್ನೊಂದು ಹೊಸ ಸಂಗತಿ ಗೊತ್ತಾಯಿತು. ಬೆಳಗಿನ ಜಾವದಲ್ಲಿ ಸಾಗುಗೆರೆ ನಾರಾಯಣಶಾಸ್ತ್ರಿಯನ್ನು ಕರೆದುಕೊಂಡು ಬಹಿರ್ದೇಶಕ್ಕಾಗಿ ಚಾಮುಂಡೀ ಬೆಟ್ಟದ ಕಿಬ್ಬಿಗೆ ಹೋದರು. ಬೆಟ್ಟದ ಸಮೀಪಕ್ಕೆ ಹೋದಾಗ ಪದ್ಧತಿ ಪ್ರಕಾರ ಶಿಷ್ಯ ಹಿಂದೆ ನಿಂತ

ನು. ಶಾಸ್ತ್ರಿಗಳು ತಂಬಿಗೆಯನ್ನು ತೆಗೆದುಕೊಂಡು ಮುಂದಕ್ಕೆ ಹೋದರು. ಮೊಬ್ಬಾಗಿಯೇ ಇತ್ತು. ಕಣ್ಣಿಗೆ ಮುಂದೆ ಹೋದವರು ಕಾಣಿಸುವಹಾಗಿರಲಿಲ್ಲ. ಶಿಷ್ಯನು ತನ್ನ ಪ್ರಾತಃಕಾಲದ ಅನುಷ್ಠಾನಗಳನ್ನೆಲ್ಲಾ ತೀರಿಸಿಕೊಂಡು ಗುರುಗಳಿಗಾಗಿ ಕಾಯುತಾ ಕೂತುಕೊಂಡನು. ಸ್ವಲ್ಪ ಹೊತ್ತಿನಮೇಲೆ ಬೆಳಕು ಹರೆಯುತಾ ಬಂತು; ಬಿಸಿಲು ಏರಿತು; ಗಂಟೆ ಎಂಟಾಯಿತು. ಆದಾಗ್ಯೂ ಶಾಸ್ತ್ರಿಗಳು ಬರಲಿಲ್ಲ. ನಾರಾಯಣಶಾಸ್ತ್ರಿಯು ಇವರನ್ನು ನಿರೀಕ್ಷಿಸಿಕೊಂಡು ಕೂತು ಸಾಕಾಯಿತು. ಗುರುಗಳನ್ನು ಅರಿಸಿಕೊಂಡು ಹೊರಟನು. ಒಂಬತ್ತು ಗಂಟೇಸಮಯದಲ್ಲಿ ಚಾಮುಂಡೀ ಬೆಟ್ಟದ ತಪ್ಪಲಲ್ಲಿ ದೂರವಾಗಿರುವ ಒಂದು ಕಡೆ ಬೆಳ್ಳಗೆ ಕಾಣಿಸಿತು. ಶಿಷ್ಯನು ಅಲ್ಲಿಗೆ ಹೋಗಿ ನೋಡುವಾಗ್ಗೆ ನಿರ್ಮಲವಾದ ಉದಕವಿರುವ ಒಂದು ದೊಣೆ ಇತ್ತು. ಅದರ ಸಮೀಪದಲ್ಲಿ ಒಂದು ಗುಹೆ ಇತ್ತು. ಅದರ ಬಳಿ ಶಾಸ್ತ್ರಿಗಳು ನಿಂತು ಇದ್ದರು. ಬಹಿರ್ವಾಸ ಹೊದ್ದಿದ್ದರು. ತಲೆಗೆ ಒಂದು ಪಂಚೆ ಸುತ್ತಿದ್ದರು. ತಲೆ ಕತ್ತು ಬೆನ್ನುಹುರಿ ಪಾದಗಳು ಇವೆಲ್ಲಾ ಒಂದೇ ನೇರಕ್ಕೆ ಸರಳ ಹೊಡೆದಹಾಗೆ ಇತ್ತು. ಕಣ್ಣುಗಳೆರಡೂ ಅರೆಯಾಗಿ ಮುಚ್ಚಿತ್ತು. ಕರೀ ಗುಡ್ಡೆಯು ಸ್ವಲ್ಪ ಕಾಣಿಸುತಾ ಮೇಲಕ್ಕೆ

ಸಿಕ್ಕಿಹೋಗಿತ್ತು. ದೇಹದಲ್ಲಿ ಯಾವವಿಧವಾದ ಚಲನೆಯೂ ಇದ್ದಂತೆ ತೋರಲಿಲ್ಲ. ನಾರಾಯಣಶಾಸ್ತ್ರಿಯು ಬುದ್ಧಿಗೆ ಏನೂ ತೋರದೆ ಸುಮ್ಮನೆ ನಿಂತುಕೊಂಡನು. ಒಂದು ಗಳಿಗೆಯಾದಮೇಲೆ ಏನೋ ಒಂದು ಸಪ್ಪಳವಾಯಿತು. ಶಾಸ್ತ್ರಿಗಳು ಕಣ್ಣು ಬಿಟ್ಟು ನೋಡಿದರು. ಅಲ್ಲಿ ನಿಂತಿದ್ದ ಶಿಷ್ಯನನ್ನು ಕಂಡು—ನೀನು ಇಲ್ಲಿಗೆ ಯಾಕೆ ಬಂದೆ? ನಾನೇ ಬರುತಾ ಇದ್ದೆ. ಇಲ್ಲಿ ನಾನು ಹೇಗೆ ಇದ್ದೆನೋ ಅದನ್ನು ನೀನು ಯಾರಸಂಗಡಲೂ ಹೇಳಬೇಡ, ಎಂದು ಅಪ್ಪಣೆ ಮಾಡಿದರು. ಗುರುಶಿಷ್ಯರಿಬ್ಬರೂ ಮನೆಗೆ ಹೊರಟರು. ಬೆಳಗಿನ ಹೊತ್ತು ಆಹ್ನಿಕವಾದಕೂಡಲೆ ದೇವತಾರ್ಚನೆ ಕಾಲದಲ್ಲಿ ಶ್ವಾಸಧಾರಣೆಯನ್ನು ಮಾಡಿ ಕೂತುಕೊಳ್ಳುತಾ ಇದ್ದರು. ಈ ಸಂಗತಿಗಳಿಂದ ರಾಮಶಾಸ್ತ್ರಿಗಳಿಗೆ ಯೋಗಶಾಸ್ತ್ರದಲ್ಲಿ ಹೆಚ್ಚಾದ ಜ್ಞಾನವಿದ್ದದೂ ಅಲ್ಲದೆ ಯೋಗದಲ್ಲಿ ಕ್ರಮವಾದ ಅಭ್ಯಾಸವೂ ಇತ್ತೆಂದು ಹೇಳುವುದಕ್ಕೆ ಏನೇನೂ ಸಂಶಯವಿಲ್ಲ. ಸ್ನಾನಾದಿ ನಿತ್ಯಕರ್ಮವನ್ನು ಮಾಡದೆ ಬೇರೆ ಯಾವ ಕೆಲಸವನ್ನೂ ಮಾಡುತಾ ಇರಲಿಲ್ಲ. ಈ ಪದ್ಧತಿಯು ಪೂರ್ವಕಾಲದ ವೈದಿಕರಲ್ಲಿ ಸರ್ವಸಾಮಾನ್ಯವಾಗಿ ಇರುತಿತ್ತು. ಆದರೆ ಮಗನು ಸತ್ತು ಬಿದ್ದಿದ್ದಾಗ್ಲೂ ಪ್ರಾತಃಸ್ನಾನವನ್ನು ಮಾಡಿಕೊಂಡು ಬಂದು

ತರುವಾಯ ಶವವನ್ನು ತೆಗೆಸಿಕೊಂಡುಹೋಗಿ ದಹನ ಮಾಡಿಸಿದ ಪಾಪಶಾಸ್ತ್ರಿಗಳ ಮೊಮ್ಮಕ್ಕಳಲ್ಲಿ ಆದೇ ಸ್ವಭಾವ ಇದ್ದೀತೇ ಹೊರತು ಬೇರೆ ಇರಲಾರದು. ಮತ್ತು ಇವರು ಯೋಗನಿಷ್ಠರೂ ಆಗಿದ್ದಕಾರಣ ಶ್ವಾಸವನ್ನು ಧಾರಣೆ ಮಾಡಿ ಏಕಾಗ್ರಚಿತ್ತ ಉಂಟಾದಾಗ ಬಹಿರ್ಮುಖವಾಗುವತನಕ ಯತ್ನವಿಲ್ಲದೆ ಎಷ್ಟು ಹೊತ್ತು ಕಳೆದು ಹೋಗುತಿತ್ತೋ ಗೊತ್ತಾಗುತಿರಲಿಲ್ಲ. ಗಂಟೆ, ಮಿನಿಟು, ಗಡಿಯಾರ ಇದೆಲ್ಲವನ್ನೂ ಇರಿಸಿಕೊಂಡು ಇದಕ್ಕೆ ಸರಿಹೋಗಿಸಿ ಲೆಕ್ಕಾಚಾರಮಾಡಿದಲ್ಲಿ ಹೊಂದಿಕೆಯಾಗುವುದಿಲ್ಲ. ಕಾಲಗತಿಯು ಆ ಮಹಾತ್ಮರ ಸ್ವಾಧೀನವಾಗಿರಬೇಕಲ್ಲದೆ ಅವರು ಕಾಲಗತಿಯ ಸ್ವಾಧೀನವಾಗಲಾರರು. ಶಾಸ್ತ್ರಿಗಳು ಲಕ್ಷ್ಮೀವಿಲಾಸದ ಅಮ್ಮನವರು ನಿರ್ಯಾಣವಾದಾಗ ಸ್ಮಶಾನಕ್ಕೆ ಜಾಗ್ರತೆಯಾಗಿ ಹೋಗಲು ಮೇಲೆ ಕಂಡ ಆಚಾರವೂ ಆಚರಣೆಯೂ ಅಡ್ಡಿಯಾಯಿತು.

ಹೀಗಿರುವಲ್ಲಿ ದೊರೆಗೆ ಸ್ಮಶಾನದಲ್ಲಿ ಹುಟ್ಟಿದ ಅಸಮಾಧಾನವು ಆರಿಹೋಗದ ಹಾಗೆ ತಿಮ್ಮಣ್ಣಶಾಸ್ತ್ರಿಯು ಸಮಯದಲ್ಲಿ ಬಾಯಿ ಮರೆಯದೆ ರಾಮಶಾಸ್ತ್ರಿಗಳಮೇಲೆ ವಿಷವಾಕ್ಯಗಳನ್ನು ಹಾಕುತಲೇ ಇದ್ದನು. ಮತ್ತೊಂದು ದಿವಸ ಏನೋ ಒಂದು ವಿಷಯವನ್ನು ಕೇಳುವುದಕ್ಕಾಗಿ

ರಾಮಶಾಸ್ತ್ರಿಗಳನ್ನು ಕರೆದುತರಲು ದೊರೆಯು ಹೇಳಿ ಕಳು ಹಿಸಿದರು. ತಿಮ್ಮಂಣಶಾಸ್ತ್ರಿಯ ಸಂವಿಧಾನವು ಈ ಸಂದ ರ್ಭವನ್ನು ತಂದುಬಿಟ್ಟಿತು. ಒಂದೆರಡುಸಾರಿ ಜಾಗ್ರತೆಯಾ ಗಿ ಬರಹೇಳಿ ಕಟ್ಟಿಗೆಯವರೂ ಹರಿಕಾರರೂ ಬಂದರು. ಆಗ ಅರಮನೆಗೆ ಹೋಗಲು ಶಾಸ್ತ್ರಿಗಳಿಗೆ ಆಹ್ನಿಕ ಮು ಗಿದೂ ಇರಲಿಲ್ಲ, ಬೇರೆ ಹೆಚ್ಚುಗಟ್ಟಲೇ ಕೆಲಸವೂ ಇತ್ತು. ಸ್ವಲ್ಪಹೊತ್ತು ಬಿಟ್ಟು ಬರುವುದಾಗಿ ಶಾಸ್ತ್ರಿಗಳು ಕಟ್ಟಿಗೆಯ ವರಿಗೆ ಹೇಳಿದರು. ಈ ಮಾತು ದೊರೆಗೆ ಮುಟ್ಟುವವ ರೆಗೆ ಇದಕ್ಕೆ ಕೈ ಕಾಲು ಕಿವಿ ಮೂಗುಗಳು ಹುಟ್ಟಿದವು. ಆಕ್ಷಣವೇ ಶಾಸ್ತ್ರಿಗಳು ಬರಲಿಲ್ಲವೆಂದು ದೊರೆಗೆ ಬಹಳ ಅಸಮಾಧಾನವಾಯಿತು. ಶುಭ್ರವಾದ ಬಟ್ಟೆಯಮೇಲೆ ಸಂ ಣ ಕರೀಚುಕ್ಕಿ ಬಿದ್ದರೂ ಅದು ದೊಡ್ಡದಾಗಿ ಕಾಣುವು ದು. ಮಾಸಿ ಹೆಚ್ಚಾಗಿ ಕೊಳೆಯಾದ ಬಟ್ಟೆಯಮೇಲೆ ಕ ರೀಚುಕ್ಕಿ ಬಿದ್ದರೆ ಅದು ಕೊಳೆಯಸಂಗಡ ಸೇರಿ ಹೋಗಿ ಕಾಣಿಸುವುದೇ ಇಲ್ಲ. ನಿರ್ಮಲವಾದ ಕೈಗನ್ನಡಿಯಮೇಲೆ ಒಂದು ಕೈಬೆರಳು ತಗಲಿದರೂ ಅದು ಬಹಳ ಕಲ್ಮಿಷ ದಂತೆ ಕಾಣಿಸಿ ನೋಡಿಕೊಳ್ಳತಕ್ಕವರ ಮುಖವನ್ನು ವಿ ರೂಪಮಾಡಿ ತೋರಿಸುವುದು. ಹಿಂದುಗಡೆಯ ರಸ ಕೆಟ್ಟು ಹೋಗಿ ಕೊಳೆ ಕೂತ ಕನ್ನಡಿಯಮೇಲೆ ಎಷ್ಟು ಕೊಳೆ

ಅಧಿಕವಾಗಿ ಕೂತುಕೊಂಡರೂ ಹೊಸದಾಗಿಬಿದ್ದ ಕೊಳೆ ಕಾಣುವುದೇ ಇಲ್ಲ. ನೋಡಿಕೊಳ್ಳತಕ್ಕವರ ಪ್ರತಿಬಿಂಬ ವೂ ಮೊದಲಿಗಿಂತಲೂ ಹೆಚ್ಚಾಗಿ ವಿರೂಪವಾಗಿ ಕಾಣುವು ದೂ ಇಲ್ಲ. ಕಾಪಟ್ಯವಿಲ್ಲದೆ ನಿರ್ಮಲವಾಗಿದ್ದ ಕೃಷ್ಣರಾಜ ಒಡೆಯರವರ ಮನಸ್ಸಿನಮೇಲೆ ಅಲ್ಪವಾದ ಕಲ್ಮಿಷವು ದುಷ್ಟ ಸಹವಾಸದಿಂದ ಸೇರಿದಾಗ್ಯೂ ಅದು ದೊಡ್ಡದಾಗಿ ಕಾಣಿಸಿತು. ದೊರೆಯ ಮನಸ್ಸಿಗೆ ಉಂಟಾದ ಅಸಮಾ ಧಾನವು ಶಾಸ್ತ್ರಿಗಳಿಗೆ ತಿಳಿಯಿತು. ಆಗ ಶಾಸ್ತ್ರಿಗಳು—ಬ್ರಾ ಹ್ಮಣರು ಯಾವಾಗಲು ಯಾಚನೆಯಿಂದ ಜೀವಿಸತಕ್ಕವರು. ಪ್ರಪಂಚವೆಲ್ಲಾ ದೇಶೋವಿಶಾಲವಾಗಿದೆ. ಈ ಸಂಸ್ಥಾನ ವಿಲ್ಲದಿದ್ದರೆ ಇನ್ನೂ ಅನೇಕ ಸಂಸ್ಥಾನಗಳಿವೆ. ಈ ದೊ ರೆಗೆ ಕೋಪಬಂದರೆ ನಾವು ಇನ್ನು ದುಷ್ಟರ ಪ್ರಾಬಲ್ಯವು ಳ್ಳ ಈ ರಾಜ್ಯದಲ್ಲಿರುವುದಿಲ್ಲ, ಎಂದು ಹೇಳಿ ೨೦ ಜನ ಶಿಷ್ಯರನ್ನು ಕರೆದುಕೊಂಡು ಮುಖ್ಯ ಶಿಷ್ಯರಾದ ವಿಜಯ ರಾಘವಾಚಾರ್ಯರೊಡಗೂಡಿ ಸಂಸಾರಸಮೇತವಾಗಿ ಕ್ಷಿಪ್ರ ದಲ್ಲಿಯೇ ಕಂಚಿಗೆ ಹೊರಟುಹೋದರು. ಹೋಗುವಾಗ ಶಾಸ್ತ್ರಿಗಳು ದೊರೆಯನ್ನು ಕಾಣಲಿಲ್ಲ. ಇದೆಲ್ಲಾ ದೊರೆ ಗಳವರೆಗೂ ಮುಟ್ಟಿತು. ಅವರು ಯಾವಮಾತನ್ನೂ ಆ ಕಡೆ ಸುಮ್ಮನಾದರು.

# ೧೧ನೇ ಅಧ್ಯಾಯ

## ದಕ್ಷಿಣದೇಶಸಂಚಾರ (ಎರಡನೇ ಸಾರಿ)

ನಾರಾಯಣಶಬ್ದಕ್ಕೆ ಶಿವಪರ ಅರ್ಥ—ರಾಜಪೂಜ್ಯತೆ.

ಜನರ ಮರ್ಜಿ ಈಗಿರುವಹಾಗೆ ಪೂರ್ವದಲ್ಲಿ ಎಂದರೆ ಈಗ ೫೦—೬೦ ವರುಷಕ್ಕೆ ಮುಂಚೆ ಇರಲಿಲ್ಲ. ಬರುಬರುತಾ ಬದಲಾಯಿಸುತಾ ಬಂತು. ಇಂಗ್ಲಿಷು ವಿದ್ಯೆ ಈಚೆಗೆ ಹರಡಿಕೊಂಡಿತು. ಇಂಗ್ಲಿಷ್ ವಿದ್ಯವು ಅನ್ಯದೇಶದ ವಿದ್ಯ. ಅದನ್ನು ಹೇಳತಕ್ಕವರು ಕ್ರಿಸ್ತಮತದವರು. ಮುಖ್ಯವಾಗಿ ಕ್ರಿಸ್ತಪಾದ್ರಿಗಳಾದ ಮಿಷನೆರಿಗಳೇ ಈ ವಿದ್ಯಾಭ್ಯಾಸಕ್ಕೆ ಈ ದೇಶದಲ್ಲಿ ಆರಂಭಿಸಿದರು. ಇವರು ಸ್ವಮತವಿಚಾರವಾಗಿ ಬೋಧಿಸತಕ್ಕದ್ದು ಸಹಜವೇ ಸರಿ. ಆದರೆ ಸರ್ಕಾರದವರು ಇಡಿಸಿರುವ ಇಂಗ್ಲಿಷ್ ಪಾಠಶಾಲೆಗಳಲ್ಲಿಯೂ ಪಾಠವನ್ನು ಹೇಳತಕ್ಕ ಉಪಾಧ್ಯಾಯರು ಕ್ರಿಸ್ತಮತದವರೇ ಆಗಿದ್ದರು. ಸರ್ಕಾರೀ ಪಾಠಶಾಲೆಗಳಲ್ಲಿ ಮತವಿಚಾರವನ್ನು ಹೇಳಬೇಡವೆಂದು ವಿಧಿಸಿದ್ದಾಗ್ಯೂ, ಉಪಾಧ್ಯಾಯರು ಸ್ವಮತವನ್ನು ಬೋಧಿಸದೇ ಇದ್ದಾಗ್ಯೂ, ಸಂದರ್ಭಸಿಕ್ಕಿದಾಗ ನಮ್ಮ ಆರ್ಯಮತವನ್ನು ದೂಷಿಸದೆ ಅಥವಾ ಹಾಸ್ಯಮಾಡದೇ ಇದ್ದ ಉಪಾಧ್ಯಾ

ಯರು ಬಹಳ ಕಡಮೆಯಾಗಿದ್ದರು. ನಮ್ಮ ಮತಕ್ಕೂ ಪೂರ್ವಾಚಾರಕ್ಕೂ ಗುರಿಯಿಟ್ಟ ಪರಿಹಾಸ್ಯವು ಸ್ವಭಾವ ವಾಗಿ ಅದನ್ನು ಬೋಧಿಸಿ ಬುದ್ಧಿವಂತರೆನ್ನಿಸಿಕೊಂಡಿರುವ ಬ್ರಾಹ್ಮಣರ ಕಡೆಗೆ ತಿರುಗಿತು. ಇಂಥಾ ದೂಷಣೆಯೂ ಹಾಸ್ಯವೂ, ಯಾವಾಗಲೂ ಯಾರಮಾತಿನಲ್ಲಿ ಬಾಲಕರು ವಿಶ್ವಾಸವನ್ನೂ ಗೌರವವನ್ನೂ ಇಟ್ಟುಕೊಂಡಿರಬೇಕೋ ಅಂಥಾ ಉಪಾಧ್ಯಾಯರ ಮುಖೇನ ಬರುವಕಾರಣ, ಏ ನೂ ಅರಿಯದ ಬಾಲಕರು ನಮ್ಮ ಮತ ಮತವೇ ಅ ಲ್ಲವೆಂತಲೂ ನಮ್ಮ ಹಿರಿಯರು ವಿವೇಕವಿಲ್ಲದವರೆಂತಲೂ ನಂಬುವರು. ಇಂಥಾ ಬಾಲಕರು ದೊಡ್ಡವರಾಗಿ ಸರ್ಕಾ ರದ ಉದ್ಯೋಗಗಳಿಗೆ ಸೇರಿದಮೇಲೆ, ಬಾಲ್ಯದಲ್ಲಿ ಕೇಳಿ ದ ದುರಭಿಪ್ರಾಯಗಳೇ ಮನಸ್ಸಿನಲ್ಲಿ ನಾಟಿಕೊಂಡು, ಇವ ರು ಪೂರ್ವಾಚಾರಗಳನ್ನು ಬಿಟ್ಟು ಅನ್ಯದೇಶೀಯರಂತೆಯೇ ತಾವೂ ಸ್ವದೇಶೀಯರನ್ನು ಬಯ್ಯುವುದರಲ್ಲಿ ಶ್ರದ್ಧೆಯಿಂದ ಬದಲಿ ಕೆಲಸವನ್ನು ಮಾಡುವರು. ಅಧಿಕಾರದಮೇಲಿನ ಭಯದಿಂದ ಎಲ್ಲರೂ ಇವರಿಗೆ ಹುಟ್ಟಿರುವ ದುರಭಿಪ್ರಾ ಯವನ್ನು ತಿದ್ದಲು ಹಿಂತೆಗೆಯುವರು. ಇಂಥಾ ಅಧಿಕಾರಿ ಗಳು ಅಥವಾ ಗಣ್ಯರು ಬ್ರಾಹ್ಮಣರಾದರೆ ದೂಷಣೆ ಸ್ವ ಲ್ಪ ಕಡಮೆಯಾಗುವುದು; ಬ್ರಾಹ್ಮಣೇತರರಾದರೆ, ನಾನಾ

ವಿಧದಲ್ಲಿ ಒಂದಕ್ಕೆ ಹತ್ತಾಗಿ ಪರಿಣಮಿಸುವುದು. ಹೀಗೆ ಅನಾದಿಯಾದ ನಮ್ಮ ಧರ್ಮಗಳನ್ನೂ ಅವುಗಳನ್ನು ಬೋಧಿಸುವ ಬ್ರಾಹ್ಮಣರನ್ನೂ ದ್ವೇಷಿಸುವುದಕ್ಕೆ ಮಾರ್ಗವು ಅಪ್ರಯತ್ನವಾಗಿಯೇ ಉಂಟಾಗುವುದು. ಇಂಥಾ ಬ್ರಾಹ್ಮಣರು ಅನೇಕ ಶಾಸ್ತ್ರಗಳಲ್ಲಿ ಪಂಡಿತರಾದ್ದರಿಂದ ಅಂಥಾ ಪಾಂಡಿತ್ಯವನ್ನೂ ವಿದ್ಯವನ್ನೂ ಹೇಳನಮಾಡಿದರೆ, ಇನ್ನೂ ಒಂದು ಹೆಜ್ಜೆ ಮುಂದೆ ಹೋದಂತೆ ಆಗುವುದು. ಆರ್ಯರಲ್ಲಿ ಅನೇಕ ಶ್ಲಾಘನೀಯವಾದ ನಡತೆಯೂ ವಿದ್ಯೆಯೂ ಇದೆ ಎಂದು ಯಾರಾದರೂ ಅನ್ಯದೇಶದ ಪಂಡಿತರು ಹೊಗಳಿದರೆ, ಆಗ ದೇಶಾಭಿಮಾನದ ಕಿಡಿಯು ಮಿಣಗುಟ್ಟಿ ದೇಶಾಂತರದವರು ಆಡಿದ ಮಾತಿನಲ್ಲಿ ನಂಬಿಕೆಯುಂಟಾಗಿ —ಈ ಹಾಳಬ್ರಾಹ್ಮಣರು ನಮಗೆ ಯಾವುದನ್ನೂ ಹೇಳಿಕೊಡದೆ ಬಚ್ಚಿಟ್ಟುಕೊಳ್ಳುತಾರೆ, ಎಂಬ ವಾರ್ತೆ ಕೇವಲ ಗಟ್ಟಿಯಾಗಿಯೇ ಬ್ರಾಹ್ಮಣೇತರರಿಂದ ಹೊರಡುವುದು.

ಸರ್ಕಾರದ ಉದ್ಯೋಗವನ್ನು ಕುರಿತು ಮಾತನಾಡುವಾಗಲೂ ಬ್ರಾಹ್ಮಣರು ಉದ್ಯೋಗಗಳನ್ನು ತಮ್ಮ ಪೆಟ್ಟಿಗೆಯಲ್ಲಿರಿಸಿ ಬೀಗಾ ಹಾಕಿಕೊಂಡು ಬೇಕಾದಾಗ ಅದನ್ನು ತೆಗೆದು ತಮ್ಮವರಿಗೆ ಕೊಡುತಾರೆ ಎಂದು ಬ್ರಾಹ್ಮಣೇತರರು ಆಡಿಕೊಳ್ಳುವರು. ಒಳಗುಟ್ಟನ್ನರಿಯದವರ ಅಭಿ

ಪ್ರಾಯ ಹೀಗೆಯೇ ಇದೆ. ರಾಜಾವಲಂಬನ ಕಡಮೆಯಾ ದ್ದರಿಂದ, ಬರವಣಿಗೆ ಹೊರತು ಬೇರೆ ಯಾವವಿಧದ ಜೀವನವನ್ನೂ ಮಾಡಲರಿಯದ ಬ್ರಾಹ್ಮಣರು ಸರ್ಕಾರದ ಅಧಿಕಾರವನ್ನೇ ನಂಬಿದರು. ಆದರೆ ಸರ್ಕಾರದ ಅಧಿಕಾರಗಳನ್ನು ನೇಮಿಸುವ ಶಕ್ತಿಯು ನೋಡಿಕೊಂಡು ಹೋದರೆ ಬ್ರಾಹ್ಮಣೇತರರದೇ ಆಗಿದೆ. ಅವರು ಬ್ರಾಹ್ಮಣರನ್ನು ಯಾಕೆ ನೇಮಿಸುತಾರೆ? ವಿಚಾರಿಸಿ ನೋಡಿದರೆ ಕಾರಣ ದೊರೆಯುವುದು. ರಾಜ್ಯದ ಎಲ್ಲಾ ಭಾರವನ್ನೂ ಹೊತ್ತಿರತಕ್ಕ ಕೊನೇ ಅಧಿಕಾರಿಗಳು ಯಾವಜಾತಿಯವರೇ ಆಗಲಿ, ತಾವು ಹೊತ್ತಿರತಕ್ಕ ಹೊರೆಯ ತೂಕಕ್ಕೆ ಸರಿಯಾದ ವಿಷಯಕ್ಕೆ ಗಮನವನ್ನು ಕೊಡುತಾರೆ. ಅಂಥಾ ಅಧಿಕಾರಿಗಳು ಬುದ್ಧಿ ಚಾತುರ್ಯಕ್ಕೆ ಲಕ್ಷ್ಯವನ್ನು ಇಡುವರು. ಜಾತಿವ್ಯವಸ್ಥೆ ಇಲ್ಲದೆ ಬುದ್ಧಿಯನ್ನು ಆಕರ್ಷಣ ಮಾಡುವಾಗ ಪಕ್ಷಪಾತಕ್ಕೆ ಮಾರ್ಗ ಕಡಮೆಯಾಗುವುದು. ಸೂಜಿಯ ಮೊನೆಯು ಬಟ್ಟೆಯನ್ನು ಹರಿಯದೆ ಭೇದಿಸಿ ಎರಡು ಅರವೇ ಅಂತುಗಳನ್ನೂ ಒಂದಾಗಿ ಸೇರಿಸಬಲ್ಲದು. ಹಾರೆಯ ತುಂಡು ಸಜಾತಿಯವೇ ಆದರೂ ಬಟ್ಟೆಯನ್ನು ಭೇದಿಸಬಲ್ಲದೆ? ಹಾರೆಯು ಸೂಜಿಯ ಮೊನೆಯಾಗಬಹುದು. ಆಗ ಸಾಧ್ಯವೇಸರಿ. ವಿಚಾರ ಮಾಡಿದರೆ ನಿಶ್ಚಯ ಗೊತ್ತಾಗುವುದು.

ಹೀಗೆ ನಮ್ಮ ಜನರಲ್ಲಿಯೇ ವೈಮನಸ್ಯ ಹುಟ್ಟಲು ಮಾರ್ಗವಾಯಿತು. ಇದರಿಂದ ನಮ್ಮ ದೇಶದಲ್ಲಿ ಐಕಮತ್ಯ ಕೆಡುವುದಕ್ಕೆ ದೊಡ್ಡ ದಾರಿಯಾಯಿತು. ಇಂಗ್ಲೀಷು ವಿದ್ಯಾಭ್ಯಾಸವು ಇದಕ್ಕೆ ಜೇರಾಯಿತೆಂದು ಅನ್ಯಾಯವಾಗಿ ಜನರು ಊಹಿಸಿಕೊಳ್ಳುತ್ತಾರೆ.

ಈಗಿನ ಸ್ಥಿತಿ ಹೀಗೆ ಇದೆ. ಬ್ರಾಹ್ಮಣರ ಪಕ್ಷವಾಗಿ ಇಲ್ಲಿ ಬರೆಯಲು ನಾನು ವಕಾಲತ್ತು ಪಡೆದವನಲ್ಲ. ವಿಷಯವನ್ನು ಶೋಧಿಸಿ ತೋರಿದ ಸಂಗತಿಯನ್ನು ಬರೆದೆನು. ಜಾತಿ ವಾತ್ಸಲ್ಯವು ನನ್ನನ್ನು ನಾನು ಅರಿಯದಹಾಗೆ ಬಾಧಿಸುತ್ತಿರಬಹುದು. ಆದರೆ ಅಂಥಾ ಪಕ್ಷಪಾತವನ್ನು ತೋರಿಸಬೇಕಾದ ಇಷ್ಟ ನನಗಿಲ್ಲ.

ಪೂರ್ವಕಾಲದಲ್ಲಿ ಬ್ರಾಹ್ಮಣರಿಗೂ ಅಬ್ರಾಹ್ಮಣರಿಗೂ ಇಷ್ಟು ಒಡಕು ಹುಟ್ಟಿರಲಿಲ್ಲ. ಮತವಿಚಾರದಲ್ಲಿಯೂ ಆ ಸಂಬಂಧವಾದ ಪಾಂಡಿತ್ಯದಲ್ಲಿಯೂ ತಾವು ಹೆಚ್ಚಾದವರೆಂದು ಬ್ರಾಹ್ಮಣರು ತಿಳಿದಿದ್ದರೇ ಹೊರತು, ಉಳಿದ ಎಲ್ಲಾ ಭಾಗದಲ್ಲಿಯೂ ಅಬ್ರಾಹ್ಮಣರಲ್ಲಿ ಬ್ರಾಹ್ಮಣರಿಗೆ ಅವರವರ ಯೋಗ್ಯತಾನುಸಾರವಾಗಿ ವಿಶ್ವಾಸವಿತ್ತು. ಇದನ್ನು ಬ್ರಾಹ್ಮಣೇತರರೆಲ್ಲಾ ಬಲ್ಲವರಾಗಿದ್ದರು, ಮತ್ತು ಅನೇಕ ವಿಷಯಗಳನ್ನು ಬ್ರಾಹ್ಮಣರಿಂದ ಕಲಿತುಕೊಳ್ಳುತಾಲೂ ಇದ್ದರು.

ಈ ಪ್ರಕಾರವಾಗಿ ಅಬ್ರಾಹ್ಮಣರು ಅನೇಕರು ವಿದ್ವಾಂಸರಾಗಿಯೂ ಇದ್ದರು. ಇವರಲ್ಲಿ ಮದರಾಸು ಕೋರಿನ ಒಂದು ಪಾಳಯಪಟ್ಟಿಗೆ ಸೇರಿದ ವಾಸರಡ್ಡಿ ವೆಂಕಟಾಚಲನಾಯುಡು ಎಂಬಾತನು ಒಬ್ಬನಾಗಿದ್ದನು. ಈತನು ಯಾವಾಗಲೂ ಗ್ರಂಥವ್ಯಾಸಂಗವನ್ನು ಮಾಡುತಾ ಅನೇಕ ಪಂಡಿತರಿಗೆ ಆಶ್ರಯಭೂತನಾಗಿದ್ದನು. ಈತನ ಸಭೆಯಲ್ಲಿದ್ದ ವಿದ್ವಾಂಸರಿಗೆ ಅಷ್ಟದಿಗ್ಗಜಗಳು ಎಂದು ಹೆಸರಿಟ್ಟಿದ್ದನು. ಅವರಿಗೆ ಬೇಕಾದ್ದನ್ನು ಕೊಟ್ಟು ಕಾಪಾಡುತಾ ಇದ್ದನು. ಮುಖ್ಯವಾಗಿ ಅಬ್ರಾಹ್ಮಣರಾದ ಮಹಾರಾಯರ ಪ್ರೋತ್ಸಾಹವಿಲ್ಲದಿದ್ದರೆ ನಮ್ಮ ಪಂಡಿತರು ಅಷ್ಟು ವೃದ್ಧಿಗೆ ಬರುತ್ತಲೂ ಇರಲಿಲ್ಲ, ಇಷ್ಟೊಂದು ಗ್ರಂಥಗಳು ಸಂಸ್ಕೃತದಲ್ಲಿ ಹುಟ್ಟುತ್ತಲೂ ಇರಲಿಲ್ಲ. ವೆಂಕಟಾಚಲನಾಯಕನ ತರುವಾಯ ಈತನ ಮಗನಾದ ಲಕ್ಷ್ಮೀಪತಿನಾಯಕನು ತಂದೆಯಂತೆಯೇ ಸಂಸ್ಕೃತವಿದ್ಯಾಪಕ್ಷಪಾತಿಯಾಗಿದ್ದನು. ಈ ತಂದೆಮಕ್ಕಳಿಬ್ಬರೂ ಸಂಸ್ಕೃತದಲ್ಲಿ ಪಂಡಿತರಾಗಿ ಬ್ರಾಹ್ಮಣರಲ್ಲಿಯೂ ಪಂಡಿತರಲ್ಲಿಯೂ ಗೌರವವನ್ನು ಇರಿಸಿಕೊಂಡಿದ್ದರು. ಲಕ್ಷ್ಮೀಪತಿನಾಯಕನ್ನು ವರುಷಕ್ಕೊಂದುಸಾರಿ ವಿದ್ವತ್ಸಭೆಯನ್ನು ಮಾಡಿಸುತ್ತಿದ್ದನು. ಅಲ್ಲಿ ವಿಶೇಷವಾಗಿ ಶಾಸ್ತ್ರಾರ್ಥ ಮೊದಲಾದ್ದು ಜರಗುತಾ

ಇತ್ತು. ಹಿಂದೆ ಒಂದಾನೊಂದು ವರುಷದ ಸಭೆಯಲ್ಲಿ ವ್ಯಾಕರಣಶಾಸ್ತ್ರದಲ್ಲಿ ವಾಕ್ಯಾರ್ಥವಾಗುವಾಗ್ಗೆ ನಾರಾಯಣ ಶಬ್ದಕ್ಕೆ ಶಿವಪರವಾಗಿ ಅರ್ಥವಾಗುವುದೇ ಹೇಗೆ ಎಂಬ ಸಂಗತಿ ಚರ್ಚೆಗೆ ಬಂತು. ಪೂರ್ವದಲ್ಲಿ ಅಪ್ಪಯ್ಯದೀಕ್ಷಿತರು—ನಾರಾಯನ ಎಂದರೆ ಶಿವ ಎಂದು ಅರ್ಥವಾಗುತ್ತೆ; ನಾರಾಯಣ ಎಂದರೆ ಶಿವ ಎಂದು ಅರ್ಥವಾಗುವುದು ಕಷ್ಟವಾಗಿದೆ; ಣತ್ವ ಒಂದು ಬಾಧಿಸುತಾ ಇದೆ; ಣತ್ವ ಹೋಗಿ ನತ್ವವಾದರೆ, ನಾರಾಯಣಶಬ್ದಕ್ಕೆ ಶಿವ ಎಂದು ಸ್ಪಷ್ಟವಾಗಿ ಆಗಬಹುದು, ಎಂಬದಾಗಿ ನಿಷ್ಕರ್ಷೆ ಮಾಡಿದ್ದರಂತೆ.

ಸುಮಾರು ಆನಂದ ಸಂವತ್ಸರದಲ್ಲಿ ವಿಜಯರಾಘವಾಚಾರಿ ಮೊದಲಾದ ಶಿಷ್ಯರೊಡಗೂಡಿ ರಾಮಶಾಸ್ತ್ರಿಗಳು ಕಂಚಿಗೆ ಹೋದರಷ್ಟೆ. ಆಗ ಕಂಚಿಗೆ ಬಂದು ನೆಲೆಯಾಗಿ ನಿಂತಿದ್ದ ಲಕ್ಷ್ಮೀಪತಿನಾಯುಡು ಮಾರನೇ ವರುಷ ಮಾಡಿಸಿದ ಸಭೆಗೆ ರಾಮಶಾಸ್ತ್ರಿಗಳನ್ನು ದಯಮಾಡಬೇಕೆಂದು ಕರೆದನು. ಮಹಾ ಪಂಡಿತರೆಂದು ಎಲ್ಲೆಲ್ಲಿಯೂ ಪ್ರಸಿದ್ಧಿಯಾಗಿದ್ದ ಶಾಸ್ತ್ರಿಗಳು ಅದೇ ಊರಲ್ಲಿ ಹೋಗಿರುವಾಗ್ಗೆ, ಇವರಿಲ್ಲದ ಸಭೆಯು ಚಂದ್ರನಿಲ್ಲದ ಆಕಾಶವಾಗಲಾರದೆ? ಶಾಸ್ತ್ರಿಗಳೂ ಸಭೆಗೆ ಹೋದರು. ಅಲ್ಲಿ

ಕೇಚನ ಮೂರ್ಖಾನತ್ವಂ ಬಾಧತ ಇತಿ ದೀಕ್ಷಿತ ವರ್ಯೈರ ಭಾಣೀತಿ ॥ ಪ್ರಲಪಂತಿ ತನ್ಮೃಷ್ಯೈವ ಸ್ಫುರತಿ ಶಿವಾದಿತ್ಯದೀಪಿಕಾದಿ ದೃಶಾಂ ॥

ಅರ್ಥ—ಶ್ರೇಷ್ಠರಾದ (ಅಪ್ಪಯ್ಯ) ದೀಕ್ಷಿತರು ನತ್ವ ಬಾಧಿಸುವುದು ಎಂದು ಹೇಳಿದರೆಂಬದಾಗಿ ಯಾರೋ ಕೆಲವರು ಮೂರ್ಖರು ಆಡಿಕೊಳ್ಳುತಾರೆ. ಶಿವಾದಿತ್ಯದೀಪಿಕಾದಿ (ಗ್ರಂಥ) ಗಳಿಂದ ಕಂಡುಬರುವಂತೆ ಇದು ಸುಳ್ಳೇ ಎಂದು ತೋರುತ್ತೆ.

ಈ ಶ್ಲೋಕವನ್ನು ಹೇಳಿದರು. ಆಗ ವಾಕ್ಯಾರ್ಥವನ್ನು ಜರಗಿಸಿ ಒಬ್ಬ ಸ್ಮಾರ್ತ ವೈಯ್ಯಾಕರಣರ ಮೂಲಕ ನಾರಾಯಣ ಎಂದರೆ ಶಿವ ಎಂತಲೇ ಅರ್ಥ ಎಂಬದಾಗಿ ಸ್ಥಾಪನೆ ಮಾಡಿಸಿದರು. ನತ್ವಕ್ಕೆ ಬದಲಾಗಿ ಣತ್ವವೇ ಬರುತ್ತೆ ಎಂದು ಸಿದ್ಧಾಂತ ಮಾಡಿದರು. ಆಗ ಅಲ್ಲಿದ್ದ ಶ್ರೀವೈಷ್ಣವ ಪಂಡಿತರು ಇಂಥಾ ಅರ್ಥವು ವೈಷ್ಣವಮತಕ್ಕೆ ವಿರೋಧವಾದ್ದು ಎಂದು ಬಹಳವಾಗಿ ಆಕ್ಷೇಪಣೆ ಮಾಡಿದರು. ಅದಕ್ಕೆ ಶಾಸ್ತ್ರಿಗಳು—ಹಾಗಲ್ಲವೆಂದು ಆಕ್ಷೇಪಣೆ ಮಾಡತಕ್ಕವರು ಇಲ್ಲಿ ತಪ್ಪನ್ನು ತೋರಿಸಿ ನಿರ್ವಚನ ಮಾಡಬಹುದು, ಎಂದು ಹೇಳಿದರು. ಅಗ ಶ್ರೀವೈಷ್ಣವರು ಸ್ವಲ್ಪ ಹೆಣಗಾಡಿ, ಶಾಸ್ತ್ರಿಗಳು ಮಾಡಿದ

ಸಿದ್ಧಾಂತಕ್ಕೆ ಕೋಟಿ ಹತ್ತುವುದು ಕಷ್ಟವೆಂದು ಒಪ್ಪಿಕೊಂಡರು. ಆಗ ರಾಮಶಾಸ್ತ್ರಿಗಳು ನವಕೋಟಿ ಎಂಬ ಗ್ರಂಥವನ್ನು ಬರೆದರು. ಕೊನೆಗೆ ಇದು ಸಮಾಧಾನಕ್ಕೆ ಬಾರದೆ ೬೦೦—೭೦೦ ಜನ ವೈಷ್ಣವರು ಒಟ್ಟಾಗಿ ಸೇರಿ, ಮೂರು ಉಪಾಯ ಕೆಟ್ಟಕಡೆ ಕೊನೇ ಉಪಾಯವೇ ತಮಗೆ ಲೇಸು ಎಂದು ಸೊಂಟಾ ಸುತ್ತಿಕೊಂಡು ಜಗಳಕ್ಕೆ ಬಂದರು. ಅವರಿಗೆ ಉತ್ತರ ಕೊಡುವುದರಲ್ಲಿ ಶಾಸ್ತ್ರಿಗಳು —ಸ್ವಾಮಿ, ಅಪ್ಪಯ್ಯದೀಕ್ಷಿತರ ಕಾಲದಿಂದ ಈಚೆಗೆ ಇದ್ದ ಶಂಕರ ಭಟ್ಟಾಚಾರ್ಯರೆಂಬ ಒಬ್ಬ ದೊಡ್ಡ ವ್ಯಾಕರಣ ಪಂಡಿತರು ಇದನ್ನು ಸ್ಥಾಪಿಸಿದಾರೆ, ಇದು ಹೊಸದಲ್ಲ. ಮುಖ್ಯವಾಗಿ ಮತ ವಿಚಾರದಲ್ಲಿ ಹುಟ್ಟಿದ ಚರ್ಚೆಯಲ್ಲ; ಶಾಸ್ತ್ರಾರ್ಥವಾಗಿದೆ; ಶಾಸ್ತ್ರ ಪಂಙ್ತಿಯನ್ನು ಹಿಡಿದು ನಾವು ಮಾತನಾಡುತೇವೆ, ಇಲ್ಲಿ ಯಾವಮತ ದೂಷಣೆಯೂ ಬಂದಿಲ್ಲ, ಎಂದು ಸಮಾಧಾನ ಹೇಳಿದರು. ಆಗ ಶಾಸ್ತ್ರಿಗಳನ್ನು ಅಲ್ಲಿ ಪಂಡಿತರೆಲ್ಲಾ ಕೊಂಡಾಡಿದರು. ಲಕ್ಷ್ಮೀಪತಿನಾಯಡು ಇವರಿಗೆ ಒಂದು ಮೇನವನ್ನು ಕೊಟ್ಟು ಹೆಚ್ಚಾದ ಬಹುಮಾನ ಮಾಡಿದನು. ಈ ಸಮಾಚಾರವೆಲ್ಲಾ ಮೈಸೂರ ಪ್ರಭುಗಳಾದ ಶ್ರೀಕೃಷ್ಣರಾಜ ಒಡೆಯರವರಿಗೆ ತಿಳಿಯಿತು. ಇದನ್ನು ಕೇಳಿ ದೊರೆಯು—ನಮ್ಮ ದೇಶದಲ್ಲಿ ಹುಟ್ಟಿ ಬೆಳೆದು

ನಮ್ಮ ಆಸ್ಥಾನಕ್ಕೆ ಶಿಖಾಮಣಿಯಾಗಿದ್ದ ಇಂಥ ದೊಡ್ಡವರು ಮುನಿಸಿಕೊಂಡು ನಮ್ಮ ಸೀಮೆಯನ್ನೇ ಬಿಟ್ಟು ಹೊರಟುಹೋದರಲ್ಲಾ ; ಇನ್ನು ಎಂದಿಗೆ ಪುನಃ ನಮ್ಮ ದೇಶವನ್ನು ಮೆಟ್ಟಿ ಪಾವನಮಾಡಿಯಾರು ? ಎಂದು ಪೇಚಾಡಿದರು.

ತರುವಾಯ ರಾಮಶಾಸ್ತ್ರಿಗಳು ಪರಿವಾರಸಮೇತರಾಗಿ ಮದರಾಸಿಗೆ ಹೋದರು. ಅಲ್ಲಿ ಪಾಳಯಗಾರ ಲಕ್ಷ್ಮೀಪತಿ ನಾಯಕ, ಕೊಲ್ಲಾ ಕನ್ನಯ್ಯಶೆಟ್ಟಿ, ಮದರಾಸು ಸದರ ಅದಾಲತ್ತುಕೋರ್ಟು ಪಂಡಿತರಾದ ಗೋಪಾಲಶಾಸ್ತ್ರಿ, ಅಪ್ಪಂಣಶಾಸ್ತ್ರಿ, ಚಂಗಲಪಟ್ಟ ಕಲೆಕ್ಟರ ಕಚೇರಿ ಹೆಡ್ ಶಿರಸ್ತೇದಾರ್ ಶ್ರೀನಿವಾಸರಾವ್, ನಾಯಬ ಶಿರಸ್ತೇದಾರ್ ವರದಾಚಾರಿ* ಇವರೇ ಮೊದಲಾಗಿ ಸ್ವಯಂ ವಿದ್ವಾಂಸರಾಗಿಯೂ ಅಗ್ಗ ಮದರಾಸಿನಲ್ಲಿ ಮುಖಂಡರಾಗಿಯೂ ಇದ್ದ ದೊಡ್ಡಮನುಷ್ಯರ ಸಭೆ ಸೇರಿತು. ನಾರಾಯಣಶಬ್ದ ಶಿವಪರ ಹವುದೇ ಅಲ್ಲವೆ ಎಂಬ ಸಂಗತಿಯನ್ನೇ ವಾಕ್ಯಾರ್ಥಕ್ಕೆ ಇಟ್ಟರು. ಶಾಸ್ತ್ರಿಗಳು ಒಂದುಪಕ್ಷದಲ್ಲಿ ಕೂತರು. ಇವರನ್ನು ಪ್ರತಿಭಟಿಸುವುದಕ್ಕೆ ಕುನವಾಕಂ ಅಪ್ಪಾಸಾಮಯ್ಯಂಗಾರಿ, ತಿರುಪಕುಡಿ ಅಪ್ಪನ್ನೈಯ್ಯಂಗಾರಿ, ಮಂಜಾಲಗಡ್ಡೆ ವೆಂಕಟಾಚಾರಿ, ಕಾಂಚೀಪುರದ ಮಾಧ್ವ ವಾಸುದೇವಾಚಾರಿ, ಈ ನಾಲ್ಕು ಜನ ಪಂಡಿತರು ಸಿದ್ಧರಾದರು.

ಮೊದಲು ಇದೇವಿಷಯವಾಗಿ ಕಂಚಿಯಲ್ಲಿ ಉಪನಿಷತ್ ಬ್ರಹ್ಮರ ಮಠದಲ್ಲಿ ವಾಕ್ಯಾರ್ಥ ಜರಗಿತ್ತು, ತರುವಾಯ ಮದರಾಸು ತಿರುವಳಕ್ಕೇಣಿಯಲ್ಲಿರುವ ಪಾರ್ಥಸಾರಥಿ ಗುಡಿಯಲ್ಲಿ ಜರಗಿತು. ರಾಮಶಾಸ್ತ್ರಿಗಳು ತಮ್ಮ ಸಿದ್ಧಾಂತವನ್ನೇ ಸ್ಥಾಪಿಸಿದರು. ರಾಮಶಾಸ್ತ್ರಿಗಳ ಪಾಂಡಿತ್ಯವನ್ನು ಎಲ್ಲರೂ ಹೊಗಳಿದರು. ಇವರಿಗೆ ಅತ್ಯುತ್ತಮವಾದ ಬಹುಮಾನವನ್ನು ಮಾಡಿದರು. ಕೊಲ್ಲಾ ರಾಘವಶೆಟ್ಟಿಯು ಇವರಿಗೆ ಒಂದು ಮೇನವನ್ನು ಕೊಟ್ಟನು. ಆಗ ಶಾಸ್ತ್ರಿಗಳು ತಮ್ಮ ಶಿಷ್ಯರಾದ ದೊಡ್ಡಬಳ್ಳಾಪುರದ ವಾಸುದೇವಶಾಸ್ತ್ರಿಗಳ ಮೂಲಕ ಜಗನ್ಮಿಥ್ಯಾತ್ವವನ್ನು ಸ್ಥಾಪಿಸಿದರು.

ಈ ವರ್ತಮಾನವೂ ಕೃಷ್ಣರಾಜ ಒಡೆಯರವರಿಗೆ ಮುಟ್ಟಿತು. ರಾಮಶಾಸ್ತ್ರಿಗಳು ಈ ಸೀಮೆಯನ್ನು ಬಿಟ್ಟು ಹೊರಟುಹೋದ ಭಾಗದಲ್ಲಿ ಅವರ ಪರಿತಾಪವು ಇನ್ನೂ ಹೆಚ್ಚಿತು. ಕೆಟ್ಟಜನರ ಮಾತನ್ನು ನಾನು ಕೇಳಿ ದುಡುಕಿದೆ ; ಇನ್ನು ಅಂಥಾ ದೊಡ್ಡವರು ನಮ್ಮ ಸೀಮೆಗೆ ಎಂದಿಗೆ ಬಂದಾರು, ಅವರನ್ನು ಇಲ್ಲಿ ನಾನು ಎಂದಿಗೆ ಕಂಡೇನು ! ಎಂದು ಬಹುವಾಗಿ ದೊರೆಯು ಹಲುಬಿ, ಶಾಸ್ತ್ರಿಗಳನ್ನು ಮೈಸೂರಿಗೆ ಬರಮಾಡಿಕೊಳ್ಳುವುದಕ್ಕೆ ತಕ್ಕ ಪ್ರಯತ್ನ ಮಾಡುತಿದ್ದರು.

ಅಷ್ಟರಲ್ಲಿಯೇ ಶ್ರೀರಂಗಪಟ್ಟಣಕ್ಕೆ ಅಕಸ್ಮಾತ್ತಾಗಿ ಶಾಸ್ತ್ರಿಗಳು ಬರಬೇಕಾದ ಸಂದರ್ಭಬಿತ್ತು. ಶಾಸ್ತ್ರಿಗಳ ಪಾಂಡಿತ್ಯದ ಪ್ರಕಾಶವು ಎಲ್ಲೆಲ್ಲಿಯೂ ಹರಡಿಕೊಂಡಿದ್ದ ಹಾಗೆಯೇ ಬೆಂಗಳೂರ ಪಟ್ಟಣದಲ್ಲಿಯೂ ಜನಜನಿತವಾಗಿತ್ತು. ಬರುತಾ ದಾರಿಯಲ್ಲಿ ಶಾಸ್ತ್ರಿಗಳು ಬೆಂಗಳೂರಿಗೂ ಬಂದರು. ಅಲ್ಲಿ ಕೆಲವು ಅಧಿಕಾರಿಗಳ ಬಲವಂತಕ್ಕಾಗಿ ಅವರು ಸ್ವಲ್ಪದಿವಸ ನಿಲ್ಲಬೇಕಾಯಿತು. ದ್ವೇಷವಾಗಲಿ ಪ್ರೀತಿಯಾಗಲಿ ದೂರದಲ್ಲಿರುವುದಕ್ಕಿಂತಲೂ ಸಾಮೀಪ್ಯದಲ್ಲಿ ಅಧಿಕವಾಗುವುದು ಸಹಜ. ರಾಮಶಾಸ್ತ್ರಿಗಳು ಕಣಾವೇಕೆಳಗೆ ನಾರಾಯಣ ಶಬ್ದಕ್ಕೆ ಶಿವ ಎಂದು ಅರ್ಥಮಾಡಿ ಸಿದ್ಧಾಂತಮಾಡಿದ್ದು ವೈಷ್ಣವಮತ ದೂಷಣೆಯೇ ಎಂದು ಕೆಲವು ವೈಷ್ಣವರು ಭಾವಿಸಿಕೊಂಡರು. ಈ ಅಭಿಪ್ರಾಯವುಳ್ಳ ಹಲವು ವೈಷ್ಣವರು ಬೆಂಗಳೂರಲ್ಲಿ ರಾಮಶಾಸ್ತ್ರಿಗಳೊಡನೆ ವಾಕ್ಯಾರ್ಥಮಾಡಿ ಇವರ ಸಿದ್ಧಾಂತವನ್ನು ಖಂಡಿಸಬೇಕು, ಸಾಗದಿದ್ದರೆ ಸ್ಮಾರ್ತರ ಆಸುರವಾದಕ್ಕೆ ಕೈಲಾಗುವ ಶಿಕ್ಷೆಯನ್ನು ಮಾಡಿಯೇಬಿಡಬೇಕೆಂದು ತಮ್ಮೊಳಗೆ ಗೊತ್ತುಮಾಡಿಕೊಂಡಿದ್ದರಂತೆ. ಈ ವಾದವಿಚಾರವು ಶಾಸ್ತ್ರಿಗಳಿಗೂ ತಿಳಿಯಿತು. ಸ್ಥಳವೂ ಕಾಲವೂ ಸಹ ಗೊತ್ತಾಯಿತು. ಪರಪಕ್ಷದವರಿಗೆ ಅಪಜಯವಾದರೆ ಅವರು

ಮಾಡಬೇಕೆಂದಿದ್ದ ಪಿಡಿಗುದ್ದಿನ ಸೇವೆಯ ವರ್ತಮಾನ ರಹಸ್ಯದಲ್ಲಿಯೇ ಇತ್ತು. ಈ ಮಧ್ಯಕಾಲದಲ್ಲಿ ಈ ಗುಟ್ಟನ್ನು ತಿಳಿದಿದ್ದ ಯಾರೋ ಕೆಲವರು ಆಗ ಕಮಿಷನರಾಗಿದ್ದ ಜನರಲ್ ಕಬ್ಬನ್‌ಸಾಹೇಬರಿಗೆ ಈ ವಾಕ್ಯಾರ್ಥವನ್ನು ಕುರಿತು ಒಂದು ಹೆಸರಿಲ್ಲದ ಅರ್ಜಿಯನ್ನು ಬರೆದರು. ಕಮಿಷನರ್ ಕಚೇರಿಯಲ್ಲಿ ಘಟಕ ಮುನಿಷಿಯಾಗಿ ಇದ್ದ ಬೆಳ್ಳಾವಿ ಸೋಮೈಯ್ಯನವರ ಕೈಗೆ ಸುನಾವಣೆಕಾಲದಲ್ಲಿ ಈ ಹೆಸರಿಲ್ಲದ ಅರ್ಜಿಯು ಬಂತು. ಅದನ್ನು ಸಾಹೇಬರ ಅಪ್ಪಣೇಪ್ರಕಾರ ಒಡೆದು ಸೋಮಯ್ಯನವರು ಸುನಾವಣೆ ಮಾಡಿದರು. ರಾಮಶಾಸ್ತ್ರಿಗಳಿಗೂ ಬೆಂಗಳೂರ ಜನರಿಗೂ ವಾದವಾಗಬೇಕೆಂದು ಗೊತ್ತಾದದಿವಸ ಕೈಗುದ್ದು ಮೈಗುದ್ದಾಗಿ ಕೆಲವರಿಗೆ ಪ್ರಾಣಾಪಾಯ ಸಂಭವಿಸುವುದೆಂದು ವ್ಯಕ್ತವಾಗಿತ್ತು. ಕಬ್ಬನ್‌ಸಾಹೇಬರು ಇದನ್ನು ಕೇಳಿದ ಕೂಡಲೆ ಇಂಥಾ ವಾಕ್ಯಾರ್ಥವು ಜರಗಕೂಡದೆಂದು ಅಪ್ಪಣೆಮಾಡಿ ಅದನ್ನು ನಿಲ್ಲಿಸಬೇಕೆಂದು ಬೆಂಗಳೂರ ಅಮಾಲರಿಗೆ ನಿರೂಪವನ್ನು ಬರಿಸಿದರು. ಇದರಿಂದ ಬೆಂಗಳೂರಲ್ಲಿ ಯಾವವಾದವೂ ಜರಗಲಿಲ್ಲ. ಪರಪಕ್ಷದವರಿಗೂ ಮನೋರಥ ಭಂಗವಾಯಿತು.

ಆಗ ಏನೋ ಒಂದು ಸ್ವಂತಕಾರ್ಯ ವಿದ್ದಕಾರಣ ಶಾಸ್ತ್ರಿಗಳು ಶ್ರೀರಂಗಪಟ್ಟಣಕ್ಕೆ ಬಂದರು. ಒಂದು ದಿವಸ ಪಶ್ಚಿಮವಾಹಿನಿಯಲ್ಲಿ ಸ್ನಾನಕ್ಕಾಗಿ ಬಂದರು. ಈ ಸಂಗತಿ ದೊರೆಗೆ ತಿಳಿಯಿತು. ಏನೋ ಒಂದು ವ್ಯಾಜವನ್ನು ಮಾಡಿಕೊಂಡು ದೊರೆಯು ಪಶ್ಚಿಮವಾಹಿನಿಗೆ ಬಂದು ಶಾಸ್ತ್ರಿಗಳು ಇಳಿದಿದ್ದ ಸ್ಥಳಕ್ಕೆ ಹೋದರು. ಆಗ ಶಾಸ್ತ್ರಿಗಳು ಫಲಮಂತ್ರಾಕ್ಷತೆಯನ್ನು ಕೊಟ್ಟು ಆಶೀರ್ವಾದವನ್ನು ಮಾಡಿದರು. ಅದೇ ಸಮಯವೆಂದು ಕೃಷ್ಣರಾಜ ಒಡೆಯರವರು ಅವರನ್ನು ಕುರಿತು ಕುಶಲಪ್ರಶ್ನೆ ಮಾಡಿದ ತರುವಾಯ—ಶಾಸ್ತ್ರಿಗಳೆ, ಮದರಾಸು ಕಂಚಿ ಈ ಸ್ಥಳಗಳಲ್ಲಿ ಜರಗಿದ ದಿಗ್ವಿಜಯವನ್ನು ಕೇಳಿ ಸಂತೋಷವಾಯಿತು. ಅದೆಲ್ಲವನ್ನೂ ನೋಡಿ ಸಂತೋಷಪಡಲು ನನಗೆ ಪುಣ್ಯವಿಲ್ಲದೆ ಹೋಯಿತು. ಮುಖ್ಯವಾಗಿ ದುಷ್ಟರ ಮಾತನ್ನು ಕಿವಿಯಮೇಲೆ ಹಾಕಿಕೊಂಡು ಭಾಗ್ಯಹೀನನಾದೆ. ತಾವು ಸರ್ವಜ್ಞರು, ನನ್ನಮೇಲೆ ಹಾಗೆ ಕೋಪಮಾಡಕೂಡದು, ಮೈಸೂರಿಗೆ ಖಂಡಿತವಾಗಿ ದಯಮಾಡಿಸಬೇಕು ಎಂದು ಉಪಚಾರವಾಗಿ ಕರೆದರು. ಶಾಸ್ತ್ರಿಗಳು ದೊರೆಯ ಇಷ್ಟಪ್ರಕಾರ ಮೇನ ಬಿರುದು ಮೊದಲಾದ ವಿಶಿಷ್ಟ ಪರಿವಾರದೊಡನೆ ಮೈಸೂರಿಗೆ ಪ್ರಯಾಣಮಾಡಿದರು. ಅವರಿಗೂ

ಅವರ ಮುಖ್ಯವಾದ ಪರಿವಾರಗಳಿಗೂ ಜೋಡುಕುದುರೇ ಸಾರೋಟುಗಳು ಮೊದಲಾದ ಬಹುಮಾನಗಳೆಲ್ಲಾ ಬಂದವು. ಶಾಸ್ತ್ರಿಗಳ ಸವಾರಿಯು ಒಬ್ಬ ದೊರೆ ಬಂದಹಾಗೆ ಮೈಸೂರಿಗೆ ಬಂತು. ದೊರೆಯು ವಿಶೇಷವಾಗಿ ಬಹುಮಾನಮಾಡಿದರು.

---

## ೧೨ನೇ ಅಧ್ಯಾಯ

ಮೂರನೇಸಾರಿ ಪುತ್ರೋತ್ಸವ—ನಿರ್ಯಾಣ.

---

ಪೈಯಿಂಗಳ ಸಂವತ್ಸರದ ಪುಷ್ಯಮಾಸದಲ್ಲಿ ಇನ್ನೊಂದು ಹೆಚ್ಚಿನಸಂಗತಿ ಜರಗಿತು. ಗಣ್ಯರಾದ ದೊಡ್ಡ ಉದ್ಯೋಗಸ್ಥರು ಮತ್ತು ಪಂಡಿತರು ಮೈಸೂರನ್ನು ಬಿಟ್ಟು ಸಮೀಪವಾದ ಸ್ಥಳಗಳಿಗೆ ಹೋಗಬೇಕಾದರೆ ಅರಮನೆಯ ಅಶ್ವಶಾಲೆಯಿಂದ ಜೋಡು ಕುದುರೆ ಸಾರೋಟು, ಒಂಟಿ ಕುದುರೇ ಗಾಡಿ, ಎತ್ತಿನ ಪೆಟಾರಿ ಗಾಡಿಗಳು, ಇವುಗಳೆಲ್ಲಾ ಅವರವರ ಮಾನಾನುಗುಣವಾಗಿ ಬರುತಿದ್ದವು. ರಾಮಶಾಸ್ತ್ರಿಗಳಿಗೆ ಇಂಥಾ ಪ್ರಮೇಯದಲ್ಲಿ ಜೋಡು ಕುದುರೇ ಕಟ್ಟಿದ ಸಾರೋಟು ಬರತಕ್ಕ ವಾಡಿಕೆ ಇತ್ತು. ಆದರೆ ಇವರು ಈ ವಿಧದ

ಡಂಭ ಯಾವುದನ್ನೂ ಅಪೇಕ್ಷಿಸುತಾ ಇರಲಿಲ್ಲ. ಯಾವ ಕಾಲದಲ್ಲಿ ಎಲ್ಲಿಗೆ ಹೋಗಬೇಕೆಂದು ತೋರಿದರೆ ಅಲ್ಲಿಗೆ ನಡೆದುಕೊಂಡು ಹೊರಟುಹೋಗುತಾ ಇದ್ದರು. ಈಪ್ರಕಾರ ಒಂದುದಿವಸ ನಂಜನಗೂಡಿಗೆ ಹೋಗಬೇಕೆಂದು ತೋರಿತು. ಆಗ ಸುಬ್ರಹ್ಮಣ್ಯಶಾಸ್ತ್ರಿ ಎಂಬ ಶಿಷ್ಯನನ್ನು ಕರೆದುಕೊಂಡು, ಮಡಿ ಚೀಲವನ್ನು ಹೆಗಲಿಗೆ ಹಾಕಿಕೊಂಡು ಶಾಸ್ತ್ರಿಗಳು ನಂಜನಗೂಡಿಗೆ ಪಾದಚಾರಿಯಾಗಿ ತೆರಳಿದರು. ಈ ಶಿಷ್ಯನು ಗುರುಗಳಲ್ಲಿ ಕೇವಲ ಸಲಿಗೆಯಾಗಿದ್ದನು. ಅರ್ಧ ಮಾರ್ಗದಲ್ಲಿ ಹೋಗುತಾ ಇರುವಾಗ ಶಾಸ್ತ್ರಿಗಳು ದಾರಿಸಾಗುವುದಕ್ಕಾಗಿ ಲೋಕಾಭಿರಾಮವಾದ ಮಾತುಗಳನ್ನು ಆಡಿಕೊಂಡು ನಡೆಯುತಾ ಶಿಷ್ಯನನ್ನು ಕುರಿತು—ಸುಬ್ರಹ್ಮಣ್ಯ, ಈಗ ನಮ್ಮ ಹೆಂಗಸು (ಹೆಂಡತಿ) ಗರ್ಭಿಣಿಯಾಗಿದಾಳೆ ಯಷ್ಟೆ. ಗಂಡುಮಗು ಹುಟ್ಟುವುದು. ನೀವು ಈಣವೇಕೆಳಗಿನವರು, ನಿಮ್ಮಕಡೆ ಒಳ್ಳೇಹೆಸರು ಇಡುತಾರೆ. ಶಿವಪರವಾಗಿರುವ ಒಂದು ಹೆಸರನ್ನು ಹೇಳು.

ಸುಬ್ರಹ್ಮಣ್ಯ ಶಾ||—ಅಮ್ಮ ಇನ್ನೂ ಗರ್ಭಿಣಿಯಾಗಿದಾರೆ. ಗರ್ಭದಲ್ಲಿ ಶಿಶು ಇದೆ. ಇದು ಗಂಡುಮಗು ಎಂತ ನಿಶ್ಚಯವಾಯಿತೆ? ಹುಟ್ಟದೇ ಇರುವ ಮಗುವಿಗೆ ಹೆಸರು ಎಂದರೇನು? ಇದೇನು ಆಶ್ಚರ್ಯ?

ರಾಮ ಶಾ||—ಛಿ, ನೀನೇನುಬಲ್ಲೆ, ನಾವು ಪುಂಸವನ ಕರ್ಮ ಮಾಡಿದೇವೆ. ಪುತ್ರನೇ ಹುಟ್ಟುತಾನೆ. ಇದಕ್ಕೆ ಸಂಶಯವಿಲ್ಲ. ಹುಚ್ಚನಹಾಗೆ ಮಾತನಾಡಬೇಡ. ಶಿವ ಎಂದು ಹೆಸರಿಡೋಣವೆ?

ಸುಬ್ರ—ಹಾಗಾದರೆ ಶಿವ ಎಂತಲೇ ನಾಮಕರಣ ಮಾಡಬಹುದು.

ರಾಮ ಶಾ||—ಶಿವ ಎಂದರೆ, ಶಿವು ಶಿವು ಎಂದು ಹೆಸರನ್ನು ಸ್ವಲ್ಪ ವಿಕೃತಿಮಾಡಿ ಅದಕ್ಕೆ ಅಪಾರ್ಥವನ್ನು ಅಲ್ಪಜನರು ನಮ್ಮ ತೆಲಗಿನಲ್ಲಿ ಹೇಳುತಾರೆ. ಶಿವಸ್ವಾಮಿ ಎಂತಲೇ ಆಗಲಿ ಹಾಗೆ ಏನಾದರೂ ಲಕ್ಷಣವಾಗಿ ಹೆಸರಿಡಬೇಕು. ಹಾಗೆ ಹೇಳು.

ಸುಬ್ರ—ಹಾಗಾದರೆ ಶಿವಸ್ವಾಮಿ ಎಂತಲೇ ಇಡಬಹುದು.

ರಾಮ ಶಾ||—ಆದರೆ ಶಿವಸ್ವಾಮಿ ಎಂತಲೇ ನಾಮಕರಣ ಮಾಡೋಣ.

(ಹೀಗೆ ಹೇಳಿ ಅರೆಗಳಿಗೆ ಸುಮ್ಮನೇ ಮಾತನಾಡದೆ ಮುಂದೆ ನಡೆದುಹೋಗುತಾ)

ರಾಮ ಶಾ||—ಸುಬ್ರಹ್ಮಣ್ಯಾ, ಏನೋ ನಾವು ಶಿವಸ್ವಾಮಿ ಎಂದು ನಾಮಕರಣವನ್ನು ಮಾಡಿದೆವಷ್ಟೆ. ಸ್ವಾಮಿ ಎಂದು ಹೇಳಿದಮೇಲೆ ಈ ಮಗನು ಸನ್ಯಾಸಿಯಾಗಿ

ಸ್ವಾಮಿಯೇ ಆದಾನೋ! ಹಾಗೆಯೇ ಕಾಣುತ್ತೆ. ಸರಿ, ಇವನಿಗೆ ಆಶ್ರಮ ಸ್ವೀಕಾರವಾಗಿ ಇವನು ಸ್ವಾಮಿಯೇ ಆಗುತಾನೆ, ಇದು ಖಂಡಿತ.

ಸುಬ್ರ ಶಾ||—ಈಗ ಗಂಡುಮಗುವೂ ಹುಟ್ಟಿತು ; ನಾಮಕರಣವೂ ಆಯಿತು ; ಆತನು ಸ್ವಾಮಿಯೂ ಆದ, ಇದೆಲ್ಲಾ ಏನು ಭ್ರಾಂತಿಯೆ ? ಮತ್ತೇನಾದರೂ ಉಂಟೆ ?

ರಾಮ ಶಾ||—ನೀನು ಯಾವಾಗಲೂ ಹೀಗೆ ಮಾತನಾಡುತೀಯೆ, ಆ ರಹಸ್ಯಗಳೆಲ್ಲಾ ನಿನಗೇನು ಗೊತ್ತು ? ನಾನು ಹೇಳಿದಂತೆಯೇ ಜರಗುವುದು. ಮುಂದೆ ನೋಡಿಕೊ.

ಹೀಗೆ ಮಾತನಾಡಿಕೊಂಡು ಗುರುಶಿಷ್ಯರಿಬ್ಬರೂ ನಂಜನಗೂಡಿಗೆ ಹೋದರು.

ತರುವಾಯ ಕೆಲವು ತಿಂಗಳಮೇಲೆ ಪ್ರಯಿಂಗಳ ಸಂವತ್ಸರ ಫಾಲ್ಗುಣ ಬಹುಳ ೧೧ ಗುರುವಾರದಲ್ಲಿ ಮೈಸೂರಲ್ಲಿ ಪುತ್ರಜನನವಾಯಿತು. ಮೊದಲು ನಂಜನಗೂಡು ದಾರಿಯಲ್ಲಿ ಸುಬ್ರಹ್ಮಣ್ಯಶಾಸ್ತ್ರಿಯ ಸಂಗಡ ಮಾತನಾಡುತಾ ನಿಷ್ಕರ್ಷೆ ಮಾಡಿದ್ದಪ್ರಕಾರವೇ ಶಾಸ್ತ್ರಿಗಳು ಶಿಶುವಿಗೆ ಶಿವಸ್ವಾಮಿ ಎಂದು ನಾಮಕರಣವನ್ನು ಮಾಡಿದರು.

ಕೂಡಲೆ ರಾಮಶಾಸ್ತ್ರಿಗಳು ಮಗುವಿನ ಜಾತಕವನ್ನೂ ವಿಧವಿಧವಾದ ಹಂಣುಗಳು ವೀಳೆಯ ಸಕ್ಕರೆ ಇವುಗಳ ನ್ನೂ ತಟ್ಟೆಗಳಲ್ಲಿ ಶಿಷ್ಯರ ಮೂಲಕ ತೆಗೆಯಿಸಿಕೊಂಡು ಅರಮನೆಗೆ ಹೋಗಿ ದೊರೆಗೆ ಒಪ್ಪಿಸಿದರು. ಪ್ರಭುಗಳು ಆ ಜಾತಕವನ್ನು ನೋಡಿ—ಶಾಸ್ತ್ರಿಗಳೆ, ಈ ಜಾತಕಸ್ಥನು ನಿಮಗೂ ನಮಗೂ ಕೂಡ ಸ್ವಾಮಿಯಾಗಿಯೇ ಕೂತು ಕೊಳ್ಳುತಾನೆ; ಅದಕ್ಕೆ ಸರಿಯಾಗಿಯೇ ಶಿವಸ್ವಾಮಿ ಎಂದು ನೀವು ಈಗಲೇ ನಾಮಕರಣವನ್ನು ಮಾಡಿದೀರಿ. ನೀವು ಅರಿಯದ ವಿಷಯವೇನಿದೆ? ಎಂದು ಅಪ್ಪಣೇ ಕೊಡಿಸಿ ದರು. ಈಪ್ರಕಾರ ಈ ಶಿಶುವಿಗೆ ಮುಂದಕ್ಕೆ ಆಶ್ರಮ ದೊರೆಯುತ್ತೆಂದು ಶಿಶು ಹುಟ್ಟುವುದಕ್ಕೆ ಮುಂಚೆ ಶಾಸ್ತ್ರಿಗ ಳಿಗೆ ತ್ರಿಳಿದಿತ್ತು, ಅದು ಹುಟ್ಟಿದಮೇಲೆ ದೊರೆಗೂ ತಿಳಿ ದಿತ್ತು. ಇದರಿಂದ ಕೃಷ್ಣರಾಜ ಪ್ರಭುಗಳಿಗೆ ಜಾತಕ ಭಾವವನ್ನು ನೋಡುವುದರಲ್ಲಿ ಹೆಚ್ಚಾದ ಪರಿಶ್ರಮವಿತ್ತೆಂದು ಕಂಡುಬರುತ್ತೆ. ಈ ಸಂಗತಿಯನ್ನೂ ಜಾತಕವನ್ನೂ ಸಹಾ ಜ್ಞಾಪಕದಲ್ಲಿರಿಸಿಕೊಂಡಿದ್ದು ಮಹಾರಾಜರು ಆ ಶಿವ ಸ್ವಾಮಿಗಳಿಗೇ ಆಶ್ರಮವನ್ನು ಈಚೆಗೆ ಕೊಡಿಸಿದರು. ಈ ಸ್ವಾಮಿಗಳು ಈಗ ಶ್ರೀಶೃಂಗೇರಿ ಜಗದ್ಗುರು ಪೀಠವನ್ನು ಅಲಂಕರಿಸುತಿದಾರೆ. ಹೀಗೆ ಶಾಸ್ತ್ರಿಗಳಮಾತೆಲ್ಲಾ ನಿಜವಾ

ಯಿತು. ಇದು ಯಾವಶಕ್ತಿಯೋ ಯಾವ ಮಹತ್ತ್ವೋ ಹೇ
ಳಲು ಸಾಧ್ಯವಿಲ್ಲ. ಯೋಗನಿಷ್ಠರಾದವರಿಗೆ ಕಾಣದೇ ಇ
ರುವುದು ಕಾಣುವುದು ; ಕೇಳದೇ ಇರುವುದು ಕೇಳುವುದು;
ಈ ರಹಸ್ಯವು ಅವರಿಗೇ ಗೊತ್ತು.

ತರುವಾಯ ಕಾಳಯುಕ್ತಿ ಸಂವತ್ಸರದಲ್ಲಿ ಮತ್ತೊಂ
ದುಸಾರಿ ರಾಮಶಾಸ್ತ್ರಿಗಳು ದಕ್ಷಿಣದೇಶದಲ್ಲಿ ಪುನಃ ಸಂಚಾ
ರಕ್ಕಾಗಿ ಹೋಗಿಬಂದರು. ಇದೇ ಕೊನೇ ಸಂಚಾರ.
ಸುಮಾರು ಒಂದು ವರುಷದೊಳಗಾಗಿ ಹಿಂತಿರುಗಿ ಬಂದ
ರು. ಆಗ ಎಲ್ಲಿಗೆ ಹೋಗಿದ್ದರು, ಏನೇನು ಮಾಡಿದರು
ಎಂಬ ವಿವರ ಗೊತ್ತಾಗಲಿಲ್ಲ.

ಶಾಸ್ತ್ರಿಗಳು ಪುನಃ ದೇಶಸಂಚಾರಕ್ಕಾಗಿ ಹೊರಟು
ಹೋದ ಪ್ರಮೇಯದಲ್ಲಿ, ಪೂರ್ವದ ಕೋಪವು ಶಾಸ್ತ್ರಿಗಳಿಗೆ
ಇನ್ನೂ ಇದೆಯೋ ಏನೋ ಎಂಬ ಶಂಕೆಯಿಂದ, ಮತ್ತೆ
ಹೇಗಾದರೂ ಅವರನ್ನು ಜಾಗ್ರತೆಯಾಗಿ ಬರಮಾಡಿಕೊಳ್ಳ
ಬೇಕೆಂಬ ಆತುರ ದೊರೆಗಳ ಮನಸ್ಸಿನಲ್ಲಿತ್ತು. ಆಗ ಇ
ವರ ಇಷ್ಟ ನೆರವೇರುವುದಕ್ಕೆ ಒಂದು ಸಮಯ ದೊರೆ
ಯಿತು. ಕವಿ ವರದಾಚಾರ್ಯರ ಶಿಷ್ಯರಾದ ಬೆಂಗಳೂರ
ಸೀತಾರಾಮ ಶಾಸ್ತ್ರಿಗಳಿಗೂ ಕಾಶಿ ತಿಮ್ಮಂಣಾಚಾರ್ಯರ ಮ
ಕ್ಕಳಿಗೂ ಒಂದು ವಾಕ್ಯಾರ್ಥ ಸಮನ್ವಯದ ಸಂದರ್ಭ

ಬಿತ್ತು. ದೊರೆಗಳು ಲಕ್ಷ್ಮೀ ನರಸಿಂಹಶಾಸ್ತ್ರಿಗಳನ್ನು ಮಾಧ್ಯಸ್ಥಕ್ಕೆ ಕೂರಿಸಿದರು. ಪ್ರಭುಗಳಿಗೆ ಮುನ್ನಾದಿನ ರಾತ್ರೆ ಬಿದ್ದಿದ್ದ ಸ್ವಪ್ನದಲ್ಲಿ "ಚಂಡಮುಂಡನಿಷೂದನಿ" ಎಂದು ಸಮಸ್ಸಿನಹಾಗೆ ಯಾರೋ ಹೇಳಿದಂತೆ ತೋರಿತ್ತು. ಲಕ್ಷ್ಮೀ ನರಸಿಂಹಶಾಸ್ತ್ರಿಗಳು ಮಾಡಿದ ಸಿದ್ಧಾಂತವು ರಾಜರಿಗೆ ಸ್ವಪ್ನದಲ್ಲಿ ಬಿದ್ದಿದ್ದ ಸಮಸ್ಸಿಗೆ ಅರ್ಥಮಾಡಿದಂತೆ ಆಯಿತು. ದೊರೆಯ ಮನಸ್ಸಿಗೆ ಬಹು ಸಂತೋಷವಾಯಿತು. ಆಗ ಮಹಾರಾಜರು—ಲಕ್ಷ್ಮೀ ನರಸಿಂಹಶಾಸ್ತ್ರಿಗಳು ಆ ಹುಲಿಗೆ ಸರಿಯಾದ ಮರಿ ಎಂದು ಹೇಳಿ, ಅವರಿಗೆ ಮುತ್ತಿನ ಕಂಠಿ, ಸಿಂಹಲಲಾಟದ ಕಡಗ, ಕಲಾವತ್ತು ಶಾಲು ಜೋಡಿ, ಮೊದಲಾದ್ದನ್ನು ಕೊಟ್ಟು ಬಹುಮಾನಮಾಡಿದರು. ಈ ಸಮಾಚಾರ ದೇಶಾಂತರದಲ್ಲಿರುವ ರಾಮಶಾಸ್ತ್ರಿಗಳಿಗೆ ತಿಳಯಿತು. ಅವರು ಕೂಡಲೆ ಮೈಸೂರಿಗೆ ಬಂದರು. ದೊರೆಯ ಕೋರಿಕೆ ಕೈಗೂಡಿತು. ನ್ಯಾಯಶಾಸ್ತ್ರ, ವೇದಾಂತಶಾಸ್ತ್ರ ಇವುಗಳಲ್ಲಿರುವ ಉದ್ಗ್ರಂಥಗಳಮೇಲೆ ಶಾಸ್ತ್ರಿಗಳು ಕ್ರೋಡಪತ್ರಗಳನ್ನು ಬರೆದರು.

ಸಿದ್ಧಾರ್ಥಿ ಸಂವತ್ಸರದ ಪುಷ್ಯ ಬಹುಳ ೪ ದಿವಸ ಶಾಸ್ತ್ರಿಗಳಿಗೆ ಜ್ವರಬಂತು. ಹದಿನೈದು ದಿವಸ ವಿಶೇಷವಾಗಿ ಅಲಸಿಗೆಯಾಗಿ ಮಲಗಿದ್ದು ಅದೇ ಸಂವತ್ಸರ ಮಾಘ

ಶುದ್ಧ ೪ ದಿವಸ ದೈವಾಧೀನರಾದರು. ಪ್ರಾಣಹೋಗುವುದಕ್ಕೆ ಸ್ವಲ್ಪಹೊತ್ತಿಗೆ ಮುಂಚೆ ಹೆಂಡತಿ ಮಕ್ಕಳು ಇವರೆಲ್ಲರನ್ನೂ ಕರೆದು ಅವರವರಿಗೆ ಬೇಕಾದ ಬುದ್ಧಿವಾದವನ್ನು ಹೇಳಿ—ಇನ್ನು ನನ್ನ ಆಶೆಯನ್ನು ಬಿಟ್ಟುಬಿಡಿ, ಎಲ್ಲರೂ ದೂರ ಹೊರಟುಹೋಗಿ ಎಂದರು. ಕೂಡಲೆ ತಲೆಗೆಲ್ಲಾ ತುಂಬಾ ಮುಸುಕನ್ನು ಹಾಕಿಕೊಂಡು ಶ್ವಾಸವನ್ನು ಧಾರಣೆಮಾಡಿ ಪ್ರಾಣವನ್ನು ಬಿಟ್ಟರು. ಈ ಸಂಗತಿ ಕೂಡಲೆ ದೊರೆಗೆ ತಿಳಿಯಿತು. ಮಾರನೇದಿನ ಶವವನ್ನು ಎತ್ತುವುದಕ್ಕೆ ಮುಂಚೆ ಶಾಸ್ತ್ರಿಗಳ ಮನೆಗೆ ಮಹಾರಾಜರ ಸವಾರಿಯು ದಯಮಾಡಿತು. ದೊರೆಯು ಶಾಸ್ತ್ರಿಗಳ ಮುಖವನ್ನು ನೋಡಿ ಕಂಣಿನಲ್ಲಿ ನೀರನ್ನು ಸುರಿಸುತಾ—ಪಾಂಡಿತ್ಯವೆಂಬ ಪ್ರಪಂಚವೇ ಮುಳುಗಿಹೋದಹಾಗಾಯಿತು, ಇನ್ನು ಇಂಥಾ ವಸ್ತು ಹುಟ್ಟುವುದಿಲ್ಲ, ಎಂದು ದುಃಖಪಡುತಾ ಮಕ್ಕಳಿಗೂ ಶಿಷ್ಯರಿಗೂ ಸಮಾಧಾನವನ್ನು ಹೇಳಿದರು; ಮತ್ತು ಶಾಸ್ತ್ರಿಗಳ ಕುಟುಂಬವನ್ನು ಕುರಿತು ತಾಯಿ, ತಮ್ಮ ಮಕ್ಕಳಲ್ಲಿ ನಾನು ಹಿರೀ ಮಗನೆಂದು ಭಾವಿಸಬೇಕಮ್ಮ, ಇನ್ನು ಇಂಥಾ ಅಮೋಘವಾದ ಪದಾರ್ಥ ಬಂದನ್ನು ಮಾತ್ರ ತಂದು ಕೊಡಲಾರೆವು, ಉಳಿದ ವಿಚಾರದಲ್ಲಿ ತಾವು ಯಾವ ಯೋಚನೆಯನ್ನೂ ಮಾಡಕೆಲಸವಿಲ್ಲ, ಎಂ

ದು ಹೇಳಿ, ಉತ್ತರ ಕ್ರಿಯಾದಿಗಳಲ್ಲಿ ಯಾವ ಲೋಪವನ್ನೂ ಮಾಡಕೂಡದು ಎಂದು ಅದಕ್ಕೆ ತಗಲುವ ಎಲ್ಲಾ ವೆಚ್ಚವನ್ನೂ ಅರಮನೆಯಿಂದಲೇ ಕೊಡಿಸಿದರು. ಶಾಸ್ತ್ರಿಗಳ ಹಿರೀ ಮಕ್ಕಳಾದ ಲಕ್ಷ್ಮೀನರಸಿಂಹಶಾಸ್ತ್ರಿಗಳ ಹೆಸರಿಗೆ ವಿದ್ವಾಂಸರ ಸಂಬಳವನ್ನು ಗೊತ್ತುಮಾಡಿ ಸವಾರಿಯು ಅರಮನೆಗೆ ದಯಮಾಡಿತು. ಉತ್ತರ ಕ್ರಿಯಾದಿಗಳೆಲ್ಲಾ ಸಾಂಗವಾಗಿ ನಡೆಯಿತು. ಬೇಕಾದ ವಿಶಿಷ್ಟ ಪದಾರ್ಥವೂ ವೆಚ್ಚಕ್ಕೆ ಹಣವೂ ಅರಮನೆಯಿಂದಲೇ ಬಂತು.

---

## ೧೩ನೇ ಅಧ್ಯಾಯ.

### ಗುಣಾತಿಶಯಗಳು. (೧)

---

ಹೀಗೆ ಪ್ರತಿಭಾವಿಶಿಷ್ಟರಾದ ಈ ದೊಡ್ಡ ಪಂಡಿತರು ಈ ಲೋಕವನ್ನು ಬಿಟ್ಟು ಹೊರಟುಹೋದರು. ರಾಮಶಾಸ್ತ್ರಿಗಳು ಆಕೃತಿಯಲ್ಲಿ ಉದ್ದ, ಗಾತ್ರದಲ್ಲಿ ತೆಳು, ವರ್ಣದಲ್ಲಿ ಕೆಂಪು, ಮುಖ ನಸುನೀಟ, ಗುಂಡೂ ಅಲ್ಲ ಉದ್ದವೂ ಅಲ್ಲ. ತಲೆ ದಪ್ಪವಾದ್ದು, ಸ್ವಲ್ಪ ದುಂಡು. ಹಣೆ ದೊಡ್ಡದು, ವಿಶಾಲವಾದ್ದು, ಸ್ವಲ್ಪ ಉಬ್ಬಾಗಿತ್ತು. ಕಣ್ಣು ಸುಂದರವಾದ್ದು, ವಿಲಕ್ಷಣವಾದ್ದು, ಏನೋ ದೊಡ್ಡ ವಿಷಯವನ್ನು ಯೋಚಿಸುತ್ತಾ ಇದೆಯೋ ಎನ್ನುವ

ಹಾಗೆ ಕಾಣಿಸುತಾ ಇತ್ತು. ಮೂಗು ಆ ಮುಖಕ್ಕೆ ಸ್ವಲ್ಪ ದೊಡ್ಡದು, ಕೊನೆಯಲ್ಲಿ ಕೊಂಚ ಬಗ್ಗಿತ್ತು. ಕಿವಿ ದೊಡ್ಡದು, ಉದ್ದವಾದ್ದು. ಹಲ್ಲು ಸಣ್ಣದು. ಬಾಯಿ ಚಿಕ್ಕದು. ತುಟಿ ಸಣ್ಣದು, ಖಂಡಿತವಾದ ಮನಸ್ಸನ್ನು ತೋರಿಸುತಾ ಇತ್ತು. ಅಂಗಗಳು ನೀಳ. ಕೆನ್ನೆ, ಎದೆ, ಬೆನ್ನು, ಈ ಸ್ಥಳಗಳಲ್ಲಿ ಕೂದಲು ಸುಮಾರಾಗಿ ಹೆಚ್ಚು. ಕಿವಿಯಮೇಲೆಯೂ ಕೂದಲಿತ್ತು. ಬಹಳ ವರ್ಚಸ್ವಿಯಾಗಿದ್ದರು. ಇವರು ಯಾವ ಆಭರಣವನ್ನೂ ಇಡುತಿರಲಿಲ್ಲ. ದೊಡ್ಡ ಅಂಚಿನ ದೋತ್ರವನ್ನು ಉಟ್ಟು ಹೊದಿಯುತಿದ್ದರು. ಶಾಲನ್ನೂ ಹೊದಿಯುತಿದ್ದರು. ಅರಮನೆಗೆ ಹೋಗುವಾಗ್ಗೆ ಶಾಲ್ ರುಮ್ಮಾಲನ್ನು ಸುತ್ತಿಕೊಳ್ಳುತಿದ್ದರು. ವಿಭೂತಿಯನ್ನು ಲಕ್ಷಣವಾಗಿ ಧರಿಸುತಿದ್ದರು. ರುದ್ರಾಕ್ಷಿ ಸರಗಳನ್ನು ಹಾಕಿಕೊಳ್ಳುತಿದ್ದರು. ಪಟಿಕದ ಜಪಸರಗಳನ್ನು ಕೈಗೆ ಹಾಕಿಕೊಳ್ಳುತಿದ್ದರು. ಅಂಗಪೋಷಣೆಯನ್ನು ಇವರು ಮಾಡಿಕೊಳ್ಳುತಾ ಇರಲಿಲ್ಲ.

ಶಾಸ್ತ್ರಿಗಳು ಯಾವಾಗಲೂ ಆತ್ಮಾನುಸಂಧಾನದಲ್ಲಿಯೇ ಇರುತಿದ್ದರು. ಚಿತ್ತವೃತ್ತಿಯನ್ನು ಯಾವಾಗಲೂ ತಮ್ಮ ಅಧೀನದಲ್ಲಿಯೇ ಇಟ್ಟುಕೊಂಡಿರುತಿದ್ದರೇ ಹೊರತು ಮನೋವಿಕಾರಗಳಿಗೆ ವಶರಾಗುತಿರಲಿಲ್ಲ. ಇವರು ಹೀಗೆ

ಅಂತರ್ಮುಖಿಗಳೆಂಬ ಸಂಗತಿ ಇವರ ಗುರುಗಳಾದ ಶ್ರೀ ನಿವಾಸಾಚಾರ್ಯರಿಗೂ ಗೊತ್ತಾಗಿತ್ತು. ಈ ಆಚಾರ್ಯರಿಗೆ ೮೦ ವರುಷಕ್ಕೆ ಮೇಲ್ಪಟ್ಟು ವಯಸ್ಸಾಗಿತ್ತು. ಇವರು ಆಗಾಗ ರಾಮಶಾಸ್ತ್ರಿಗಳ ಮನೆಗೆ ಬರುತಿದ್ದರು. ಅವರು ಬಂದಾಗ ಆಚಾರ್ಯರಿಗೆ ಶಾಸ್ತ್ರಿಗಳು ಎದ್ದು ನಮಸ್ಕಾರ ಮಾಡುತಾ ಇದ್ದರು. ಕೂಡಲೆ ಶಾಸ್ತ್ರಿಗಳ ಶಿಷ್ಯರೆಲ್ಲಾ ಎದ್ದು ನಮಸ್ಕಾರಮಾಡುತಿದ್ದರು. ಆಚಾರ್ಯರು ಬಂದು ಕೂತುಕೊಂಡು ರಾಮಶಾಸ್ತ್ರಿಗಳು ಪಾಠ ಹೇಳುವುದನ್ನು ಕೇಳಿಕೇಳಿ ಸಂತೋಷಪಡುತಿದ್ದರು. ಶಾಸ್ತ್ರಿಗಳನ್ನು ಕುರಿತು ಆಚಾರ್ಯರು—ರಾಮುಡು, ನಾನು ಮನೆಗೆ ಹೋಗಲಾರೆ, ಇಲ್ಲಿಯೇ ಭೋಜನಮಾಡುತೇನೆ, ಎಂದು ಹೇಳುತಿದ್ದರು. ಮತ್ತು ಶಾಸ್ತ್ರಿಗಳ ಹೆಂಡತಿಯನ್ನು ಕುರಿತು—ಲಕ್ಷಮ್ಮ, ನಾನು ಮುದಕ, ಬಾಯಿಗೆ ಚಾಪಲ್ಯ ಹೆಚ್ಚು, ಚೆನ್ನಾಗಿ ಅಡಿಗೇ ಮಾಡಮ್ಮ, ನಾನು ಮೊದಲು ಭೋಜನ ಮಾಡು ತೇನೆ; ನಿನ್ನ ಗಂಡನನ್ನು ನೆಚ್ಚಿದರೆ ಅಗುವುದಿಲ್ಲ; ಅ ವನು ಮೂಗ ಹಿಡಿದುಕೊಂಡು ಕೂತರೆ ಮೂರುದಿವಸ ವಾದರೂ ಏಳುವುದಿಲ್ಲ, ಎನ್ನುತಿದ್ದರು. ಇದನ್ನು ಕೇಳಿದ ಕೂಡಲೆ ಲಕ್ಷ್ಮಮ್ಮನವರು ಬಂದು ಆಚಾರ್ಯರಿಗೆ ನಮ ಸ್ಕಾರಮಾಡಿ ಯಾವ ಮೇಲೋಗರವನ್ನು ಮಾಡಲಿ!

ಎಂದು ಕೇಳಿ, ಅವರ ಇಷ್ಟವಿದ್ದಂತೆ ಅಡಿಗೇ ಮಾಡಿ ಬಡಿಸುತಿದ್ದರು. ಊಟವಾದಮೇಲೆ ಆಚಾರ್ಯರು ಸ್ವಲ್ಪ ವಿಶ್ರಮಿಸಿಕೊಂಡು ಮಧ್ಯಾಹ್ನ ೪-೫ ಗಂಟೇ ಸಮಯಕ್ಕೆ ಕೋಲನ್ನು ಊರಿಕೊಂಡು ಮನೆಗೆ ಹೋಗುತಿದ್ದರು. ಶ್ರೀನಿವಾಸಾಚಾರ್ಯರಿಗೆ ತಾವು ಸ್ಮಾರ್ತರಲ್ಲಿ ಭೋಜನ ಮಾಡಕೂಡದೆಂಬ ಬಿಂಕವಾಗಲಿ ಆಚಾರವಾಗಲಿ ಲೇಶವೂ ಇರಲಿಲ್ಲ.

ಶಾಸ್ತ್ರಿಗಳು ಆತ್ಮಚಿಂತೆಯಲ್ಲಿ ಮೈಮರೆಯುತಿದ್ದ ವಿಷಯವನ್ನು ಹೇಳುವಾಗ ಶ್ರೀನಿವಾಸಾಚಾರ್ಯರ ಭೋಜನ ಪ್ರಸ್ತಾಪವು ಬಂದು ಕವಲಾಗಿಬಂತು. ಶಾಸ್ತ್ರಿಗಳು ಇತರ ಕಾಲಗಳಲ್ಲಿಯೂ ಹೀಗೆ ಮೈಮರೆದು ಹೋಗುತಿದ್ದ ಸಂಗತಿ ತಿಳಿಯಬಂದಿದೆ. ಸಾಧಾರಣವಾಗಿ ಶಾಸ್ತ್ರಿಗಳು ಶಿಷ್ಯರಿಗೆ ಪಾಠವನ್ನು ಹೇಳುತಾ ಇರುವಾಗ ಅಕಸ್ಮಾತ್ತಾಗಿ ಯಾವ ಮಾತನ್ನೂ ಆಡದೆ ಸುಮ್ಮನೆ ಕೂತಿರುತಿದ್ದರು. ಕಣ್ಣುಗುಡ್ಡೆ ಮೇಲಕ್ಕೆ ಸಿಕ್ಕಿಕೊಳ್ಳುತಿತ್ತು. ಆಗ ವಿದ್ಯಾರ್ಥಿಗಳೆಲ್ಲರೂ ಸದ್ದುಮಾಡದೆ ಸುಮ್ಮನೆ ಕೂತಿರುತಿದ್ದರು. ಚಿತ್ತ ಬಹಿರ್ಮುಖವಾದಮೇಲೆ ಹಿಂದಿನ ಸರಣಿ ಹಿಡಿದು ಶಾಸ್ತ್ರಿಗಳು ಪಾಠವನ್ನು ಮುಂದಕ್ಕೆ ಸಾಗಿಸುತಿದ್ದರು. ನೋಡಿದವರಿಗೆ ಕೂತಹಾಗೆಯೇ ನಿದ್ರೆಮಾಡುತಾರೆ ಎಂದು ಕಾಣಿಸುತಿತ್ತು.

ಒಂದುಸಾರಿ ಶಾಸ್ತ್ರಿಗಳು ಸುಬ್ರಹ್ಮಣ್ಯಶಾಸ್ತ್ರಿ, ಸೊಂಡೇಕೊಪ್ಪದ ಗಂಗಾಧರಶಾಸ್ತ್ರಿ ಈ ಇಬ್ಬರು ಶಿಷ್ಯರೊಡಗೂಡಿ ಯಡತೊರೆಗೆ ಮೈಸೂರಿಂದ ಪಾದಚಾರಿಗಳಾಗಿ ಹೋಗುತಿದ್ದರು. ಇಲವಾಲವನ್ನು ದಾಟ ಲಕ್ಷ್ಮಣತೀರ್ಥದ ಕಟ್ಟೆಕಡೆಗೆ ಹೋಗುವಾಗ ರಾಜಭಾಟೆಯಿಂದ ಒಂದು ಕಾಲುದಾರಿ ಕವಲು ಒಡೆದು ಸಮೀಪದಲ್ಲಿ ಕಾಣುತಿದ್ದ ಹಳ್ಳಿಗೆ ಹೋಗುತಿತ್ತು. ಅಲ್ಲಿ ಶಾಸ್ತ್ರಿಗಳು ಹೋಗುತ್ತಿರುವಾಗ, ಶಿಷ್ಯರಿಬ್ಬರೂ ೪೦—೫೦ ಹೆಜ್ಜೆ ಮುಂದಾದರು. ಆಗ ಮಗ್ಗಲ ಗ್ರಾಮದಿಂದ ಹೆಂಗಸರು ನೀರಿಗೆ ಹೋಗುತಾ, ಶಿಷ್ಯರಾದ ಇಬ್ಬರನ್ನೂ ಕುರಿತ.—ಏನುಸ್ವಾಮಿ, ಹಿಂದೆ ಬರುತಾ ಇದ್ದ ಬ್ರಾಹ್ಮಣನಿಗೆ ಮೂರ್ಛೆ ಹೋಗಿದೆ. ಪಾಪ ! ಅವರನ್ನು ಬಿಟ್ಟು ನೀವು ಹೋಗುತೀರಲ್ಲಾ, ನೀವು ಎಂಥವರು ? ಎಂದರು. ಆಗ ಸುಬ್ರಹ್ಮಣ್ಯಶಾಸ್ತ್ರಿ, ಗಂಗಾಧರಶಾಸ್ತ್ರಿ ಸಹಾ ಗಾಬರಿಯಾಗಿ ಹಿಂತಿರುಗಿ ಹೋಗಿ ನೋಡಲು, ರಾಮಶಾಸ್ತ್ರಿಗಳು ನಡುದಾರಿಯಲ್ಲಿ ಸುಮ್ಮನೆ ನಿಂತಿದ್ದರು. ಕಂಣುಗುಡ್ಡೆ ಮೇಲಕ್ಕೆ ಸಿಕ್ಕಿಕೊಂಡಿತ್ತು. ಶಿಷ್ಯರಿಬ್ಬರೂ ಇದನ್ನು ಕಂಡು ನಿಂತುಕೊಂಡರು. ಶಾಸ್ತ್ರಿಗಳಿಗೆ ಚಿತ್ತ ಬಹಿರ್ಮುಖವಾಯಿತು. ತರುವಾಯ ಗುರುಶಿಷ್ಯರು ಮೂರುಜನರೂ ಸೇರಿ ಮುಂದಕ್ಕೆ ಹೋದರು.

ಹೀಗೆ ಶಾಸ್ತ್ರಿಗಳು ಯಾವಕೆಲಸ ಮಾಡುತಿದ್ದರೂ, ಆತ್ಮಾನುಸಂಧಾನ ಮಾಡತಕ್ಕ ಶಕ್ತಿ ವಿಶೇಷವಾಗಿತ್ತು.

ಚಿತ್ತವನ್ನು ಜಿತಮಾಡಿಮಾಡಿ ಬಂದ ಅಭ್ಯಾಸವೂ, ಅದರಿಂದುಂಟಾಗುವ ಆನಂದವೂ ಆಗಾಗ್ಗೆ ಮನಸ್ಸನ್ನು ಸೆರೆಹಿಡಿದು ಸ್ಥೈರ್ಯವನ್ನುಂಟುಮಾಡುವುವು. ಇದರಿಂದಲೇ ಆತ್ಮಜ್ಞಾನ ಸಂಪಾದನೆಯಾಗುವುದು. ಚಿದಾನಂದರು ಅವರ ಜ್ಞಾನಸಿಂಧುವೆಂಬ ಗ್ರಂಥದಲ್ಲಿ—

ಬಯ್ಯುರಾರನು ಬಯ್ಯುಕೇಳ್ವರು । ಅಯ್ಯುಕೊಳಿರೆಂದೆನುತಲೀವರು । ಪ್ರಿಯವಚನವ ನುಡಿವರಾರಾದೊಡೆಯು ಮನ್ನಿಸುತ ॥ ಮಯ್ಯುಮರೆವರು ಆತ್ಮಚಿಂತೆಯ । ಲೊಯ್ಯನೆ ಕಣ್ದೆರದು ಮುಚ್ಚುತ । ಅಯ್ಯನೆನಿಪರು ಜಗಕೆ ಇದು ಸಾಧುಗಳ ಗುಣವೆಂದ॥

ಹೀಗೆ ಬ್ರಹ್ಮಜ್ಞಾನಿಗಳನ್ನು ವರ್ಣಿಸಿದಾರೆ. ಇದು ನಿದ್ರೆಯಾದರೆ ಯೋಗನಿದ್ರೆ; ರೋಗವಾದರೆ ಜ್ಞಾನರೋಗ. ಇದೂ ಅಲ್ಲದೆ ಕೆಲವರು ಇದನ್ನು ಒಂದು ವಿಧವಾದ ಹುಚ್ಚು ಅಥವಾ ಶಿವಲೀಲೆ ಎನ್ನುವರು. ಪ್ರತಿಭೆಯುಳ್ಳವರು ಹಲವರಿಗೆ ಹೀಗೆ ಸಂಭವಿಸುವುದು ಸಹಜವಾಗಿದೆ ಎಂದು ಪರೀಕ್ಷೆಯಿಂದ ಗೊತ್ತಾಗಿದೆ. ಮನುಷ್ಯಸ್ವಭಾವ ಎಲ್ಲಾ ದೇಶಗಳಲ್ಲಿಯೂ ಏಕರೀತಿಯಾಗಿರಲಾಗಿ ಯೋಗಾ

ಭ್ಯಾಸದಿಂದ ಸಾಧಿಸಿಕೊಂಡಿರತಕ್ಕವರು ಇದು ಆತ್ಮಾನು ಸಂಧಾನವೆಂದು ಬಲ್ಲರು. ಯೋಗಶಾಸ್ತ್ರವನ್ನು ಅರಿಯದ ವರು ಇದು ಶಿವಲೀಲೆ ಎಂದು ತಿಳಿದುಕೊಂಡಿದಾರೆ.

ಪರರ ಸ್ವತ್ತಿಗೆ ರಾಮಶಾಸ್ತ್ರಿಗಳು ಎಂದಿಗೂ ಆಶೆ ಪಡುತಾ ಇರಲಿಲ್ಲ. ಪರರ ಮನೆಗೆ ಊಟಕ್ಕೆ ಹೋಗು ವುದಕ್ಕೂ ಕೂಡ ಇವರು ಹಿಂತೆಗೆಯುತಿದ್ದರು. ಯಾರು ಕರ್ಮಠರಾಗಿ ಆಚಾರಶೀಲರಾಗಿ ಇರುತಿದ್ದರೋ ಅಂಥವರ ಮನೆಗೆ ಮಾತ್ರ ಕರೆದರೆ ಭೋಜನಕ್ಕೆ ಹೋಗುತಿದ್ದರು. ಇವರನ್ನು ತಮ್ಮ ಮನೆಗೆ ಭೋಜನಕ್ಕೆ ಕರೆದರೆ ತಮಗೆ ಹೆಚ್ಚಾದ ಗೌರವ ಉಂಟೆಂದು ಅನೇಕಜನ ಲೌಕಿಕರು ಸಹಿತ ಔಪಾಸನಾದಿಗಳನ್ನು ಮಾಡುತಿದ್ದರು. ಯಾರಾದ ರೂ ಸರಿಯೆ ನೀತಿಕೆಟ್ಟವರೆಂದು ತಿಳಿದರೆ ಅಂಥವರಲ್ಲಿ ಶಾಸ್ತ್ರಿಗಳು ಸಂಭಾಷಣೆ ಮಾಡುವುದಕ್ಕೂ ಹಿಂತೆಗೆಯುತಿ ದ್ದರು. ಅನೇಕರಿಗೆ ಇವರ ಭೀತಿಯು ವಿಶೇಷವಾಗಿತ್ತು.

ಶಾಸ್ತ್ರಿಗಳು ಬಹು ಮೆಲ್ಲಗೆ ಸಾವಕಾಶವಾಗಿ ಮಾತ ನಾಡುತಾ ಇದ್ದರು. ಮಾತಿನ ಸರಣಿ ಏನೋ ಪ್ರವಾಹ ವಾಗಿ ಹೋಗುತಾ ಇತ್ತು. ತಡೆ ಇರುತಿರಲಿಲ್ಲ. ಇವರು ಯಾವಾಗಲೂ ಶಾಂತಮೂರ್ತಿಯಾಗಿಯೇ ಇರುತಿದ್ದರು. ಕೋಪ ಬರುತಿರಲಿಲ್ಲ. ಇದೇ ಮೊದಲಾದ ಸಂಗತಿಗಳ್ಲಿ

ಇವರ ಹೆಂಡತಿ ಲಕ್ಷ್ಮಮ್ಮನವರ ಗುಣವೂ ಹೀಗೆಯೇ ಇತ್ತು ಎಂಬುವುದು ಮುಂದೆ ವ್ಯಕ್ತವಾಗುವುದು.

ಶಿಷ್ಯರನೇಕರು ಶಾಸ್ತ್ರಿಗಳ ಮನೆಯಲ್ಲಿಯೇ ಭೋಜನವನ್ನು ಮಾಡಿಕೊಂಡು ಅಲ್ಲಿಯೇ ವಾಸವಾಗಿರುತಿದ್ದರು ಎಂದು ಹಿಂದೆಯೇ ಹೇಳಿದೆ. ಹೀಗೆ ಕಣವೇ ಕೆಳಗಿನ ಸೀಮೆಗೆ ಸೇರಿದ ಸುಬ್ರಹ್ಮಣ್ಯಶಾಸ್ತ್ರಿಯು ಶಾಸ್ತ್ರಿಗಳ ಮನೆಯಲ್ಲಿಯೇ ಇದ್ದನು. ಒಂದು ದಿವಸ ಈ ಸುಬ್ರಹ್ಮಣ್ಯಶಾಸ್ತ್ರಿಗೆ ಜ್ವರ ಬಂತು. ಪಿತ್ತವಿಕಾರ ಹೆಚ್ಚಾಗಿತ್ತು. ರಾಮಶಾಸ್ತ್ರಿಗಳು ಇವನಿಗೆ ಔಷಧವನ್ನು ಕೊಟ್ಟರು. ಸುಬ್ರಹ್ಮಣ್ಯಶಾಸ್ತ್ರಿ ತೆಗೆದುಕೊಳ್ಳಲಿಲ್ಲ. ಹೊಟ್ಟೆಯಲ್ಲಿ ಅನ್ನವಿಲ್ಲದೆ ಸಂಕಟ ಹೆಚ್ಚಾಗಿದೆ ಎಂದು ತಿಳಿದು ರಾಮಶಾಸ್ತ್ರಿಗಳು ಇವರ ಭಾರ್ಯ ಇಬ್ಬರೂ ಸೇರಿ ಅನ್ನವನ್ನು ಕಲೆಯಿಸಿ ಎಲೆಯಮೇಲೆ ಹಾಕಿ ಶಿಷ್ಯನ ಹಾಸಿಗೇ ಬಳಿಗೆ ತಂದರು. ಗುರುಗಳೇ ಶಿಷ್ಯನನ್ನು ಹಿಡಿದು ಮೇಲಕ್ಕೆ ಎಬ್ಬಿಸಿದರು. ಸುಬ್ರಹ್ಮಣ್ಯಶಾಸ್ತ್ರಿಯು ಅನ್ನವನ್ನು ಸ್ವಲ್ಪ ಬಾಯಿಗೆ ಇರಿಸಿಕೊಂಡು ಓಕರಿಸಿದನು. ಆಗ ಅನ್ನವನ್ನು ಕಿವಿಚಿ ಒಂದು ಬಟ್ಟಲಿಗೆ ಹಾಕಿ ಅದನ್ನಾದರೂ ಕುಡಿ, ಎಂದು ಶಾಸ್ತ್ರಿಗಳ ಕುಟುಂಬ ಹೇಳಿದರು. ಆಗ ಜ್ವರದಿಂದ ಪೀಡಿತನಾಗಿದ್ದ ಸುಬ್ರಹ್ಮಣ್ಯಶಾಸ್ತ್ರಿಯು ಬಾಯಲ್ಲಿದ್ದ

ಅನ್ನವನ್ನು ಆ ದಂಪತಿಗಳಮೇಲೆ ಉಗುಳಿ ಎಂಜಲೆಲೆಯನ್ನು ಅವರಮೇಲೆ ಎಸೆದು ಇಬ್ಬರನ್ನೂ ಬೈದು ಮಲಗಿಕೊಂಡನು. ಆಗ ರಾಮಶಾಸ್ತ್ರಿಗಳು ನಗುತಾ—ಸುಬ್ರಹ್ಮಣ್ಯ, ಯಾವಾಗಲೂ ಹೀಗೆ ಮೌರ್ಖ್ಯಮಾಡುತೀಯಲ್ಲಪ್ಪ, ನಿನಗೆ ಯಾಕೆ ಜ್ವರಬರುತ್ತೋ ತಿಳಿಯದು, ಚಿಂತೆಯಿಲ್ಲ, ಮಲಗಿಕೊ ಎಂದು ಹೇಳಿ ಮೇಲಕ್ಕೆ ಎದ್ದರು. ಅವರ ಹೆಂಡತಿಯೂ ನಗುತಾ ಆ ಎಂಜಲೆಲ್ಲವನ್ನೂ ತೆಗೆದು ಆ ಸ್ಥಳಕ್ಕೆ ಗೋಮಯವನ್ನು ಹತ್ತಿಸಿದರು. ದಂಪತಿಗಳಿಬ್ಬರೂ ಸ್ನಾನವನ್ನು ಮಾಡಿದರು. ಸುಬ್ರಹ್ಮಣ್ಯನಿಗೆ ಹೀಗಾಯಿತಲ್ಲಾ ಎಂದು ಪೇಚಾಡುತ್ತಿದ್ದರೇ ಹೊರತು, ಆತನು ಇಂಥಾ ದುಷ್ಕಾರ್ಯವನ್ನು ಮಾಡಿದನೆಂಬ ಕಪ್ಪನ್ನು ಮನಸ್ಸಿನಲ್ಲಿ ಲೇಶವೂ ಇಡಲಿಲ್ಲ. ಇಂಥಾ ಸಹನವು ಸಾಧಾರಣರಿಗೆ ಬರುವುದಿಲ್ಲ. ಹೆತ್ತ ಮಕ್ಕಳು ಹೀಗೆ ಮಾಡಿದಾಗ್ಗೂ ಜನರು ಸಹಿಸುವುದು ಕಷ್ಟ.

ಆದರೆ ವೇದಶಾಸ್ತ್ರಗಳನ್ನು ತಿರಸ್ಕರಿಸಿ ಯಾರಾದರೂ ಮಾತನಾಡಿದಾಗ ಹೆಚ್ಚಾಗಿ ಕೋಪಬರುತಿತ್ತು. ಒಂದು ಸಮಯದಲ್ಲಿ ಅರಮನೆಯ ಆತ್ಮವಿಲಾಸದಲ್ಲಿ ವಿದ್ವಾಂಸರೆಲ್ಲರೂ ಸೇರಿರುವಾಗ್ಗೆ ಅಹೋಬಲಮಠದ ಮುಖಾಮಿಯು ನ್ಯಾಯಶಾಸ್ತ್ರ ನಾಸ್ತಿಕಶಾಸ್ತ್ರವೆಂದು ಹೇಳಿದನು. ಇದನ್ನು

ರಾಮಶಾಸ್ತ್ರಿಗಳ ಎದುರಿಗೇ ಆಡಿದನು. ಆಗ ಶಾಸ್ತ್ರಿಗಳಿಗೆ ಬಹಳವಾಗಿ ಕೋಪಬಂತು; ಕೂಡಲೆ ಅವರು ನೆಟ್ಟಗೆ ಅಂಬಾವಿಲಾಸಕ್ಕೆ ಹೋದರು. ದೊರೆಯು ಶಿವಪೂಜೆ ಮಾಡಿಕೊಂಡು ಮಡಿಯಲ್ಲಿಯೇ ಬರೀಮೈಯ್ಯಲ್ಲಿ ಎದುರಿಗೆ ಬರುತಾ ಇದ್ದರು. ಶಾಸ್ತ್ರಿಗಳು ದೊರೆಯನ್ನು ನೋಡಿ— ಇದು ಶುಂಠರರಾಜ್ಯವಾಯಿತು ಮಹಾಸ್ವಾಮಿ ಎಂದರು. ದೊರೆಯು—ಶಾಸ್ತ್ರಿಗಳಿಗೆ ವಿಶೇಷವಾಗಿ ಕೋಪಬಂದಿದ್ದ ಸಂದರ್ಭವನ್ನು ಕಂಡು ಅವರಿಗೆ ಸಮಾಧಾನವನ್ನು ಹೇಳಿದರು. ಹೀಗೆಯೇ ಇದೇ ವಿಧವಾದ ಇನ್ನೊಂದು ಸಂಗತಿ ಜರಗಿತು. ರಾಮಶಾಸ್ತ್ರಿಗಳು ಈ ಸೀಮೆಯಲ್ಲೇ ಅಲ್ಲದೆ ದೇಶಾಂತರಗಳಲ್ಲಿಯೂ ಯಶಸ್ಸನ್ನು ಪಡೆದದ್ದು ಅನೇಕರಿಗೆ ಅಸೂಯೆಯನ್ನುಂಟುಮಾಡಿತ್ತು. ಪಂತೋಜಿ ಸುಬ್ಬರಾಯನೆಂಬ ಒಬ್ಬ ಮನುಷ್ಯನು ಯಾವುದೋ ಒಂದು ಮೂಲಕವಾಗಿ ದೊರೆಯ ದಯಕ್ಕೆ ಪಾತ್ರನಾಗಿದ್ದನು. ಇವನ ಕಡೆಗೆ ಸೇರಿದ ಕೆಲವು ಜನರು ಅರಮನೆಯಲ್ಲಿ ಸೇರಿಕೊಂಡು ಸಮಯಬಂದಾಗ ಕಾಡಹರಟೆಗೆ ಅನುಕೂಲರಾಗಿದ್ದರು. ಯಾವುದೋ ಒಂದು ಕಾರ್ಯಕ್ಕಾಗಿ ರಾಮಶಾಸ್ತ್ರಿಗಳನ್ನು ಕರೆದುತರಲು ದೊರೆಯ ಅಪ್ಪಣೆಯಾಯಿತು. ಶಾಸ್ತ್ರಿಗಳು ಬರುವುದರೊಳಗಾಗಿ, ಪಂತೋಜಿ ಸುಬ್ಬರಾ

ಯನೆಕಡೆಯ ಒಬ್ಬ ಹರಟೇಮನುಷ್ಯನು—ರಾಮಶಾಸ್ತ್ರಿಗಳು ಈಗ ಎಲ್ಲಿಬರುತಾರೆ ? ತರ್ಕಶಾಸ್ತ್ರದ ನಾಸ್ತಿಕವಾದವನ್ನು ಶಿಷ್ಯರಿಗೆ ಬೋಧಿಸುತಾ ಕೂತಿದಾರೆ, ಎಂದು ಹೇಳಿದನು. ಅಷ್ಟರಲ್ಲಿ ರಾಮಶಾಸ್ತ್ರಿಗಳು ಬಂದರು. ಈ ವರ್ತಮಾನ ವನ್ನು ಕೇಳಿ ಆಗ್ರಹಗೊಂಡು ಪ್ರಭುವನ್ನು ಕುರಿತು— ಮಹಾಸ್ವಾಮಿ, ಈ ಬ್ರಾಹ್ಮಣ ಇಂಥಾ ಮಾತನ್ನು ಆಡ ಬಹುದೆ ? ಆಸ್ತಿಕಷಟ್ಕ ನಾಸ್ತಿಕಷಟ್ಕ ಎಂದು ಉಂಟು. ತರ್ಕ, ವೇದಾಂತ, ಜ್ಯೋತಿಷ, ವ್ಯಾಕರಣ, ಮೀಮಾಂಸ, ಆಯುರ್ವೇದ, ಇವು ಆಸ್ತಿಕಷಟ್ಕಗಳು. ತರ್ಕವು ನಾಸ್ತಿ ಕಶಾಸ್ತ್ರವೆಂದು ಆ ಶ್ರೀವೈಷ್ಣವಬ್ರಾಹ್ಮಣ ಸಿದ್ಧಾಂತಮಾಡಿ ತೋರಿಸಬೇಕು, ಆಗ ನಾನು ಈ ಬ್ರಾಹ್ಮಣಿಕೆಯನ್ನು ಬಿಟ್ಟುಬಿಡುತೇನೆ. ಹಾಗೆ ಮಾಡದೆ ಆತನು ತಪ್ಪಿಹೋದರೆ ಆತನು ಬ್ರಾಹ್ಮಣ್ಯವನ್ನು ಬಿಟ್ಟುಬಿಡಲಿ. ಇಂಥಾ ಅಲ್ಪಜ ನರು ಹೀಗೆ ಆಡುವ ಮಾತನ್ನು ಕೇಳಿ ನಾನು ಸಹಿಸ ಲಾರೆ ಎಂದು ರಾಮಶಾಸ್ತ್ರಿಗಳು ಹೇಳಿದರು. ಆಗ ದೊ ರೆಯು ಆ ಶ್ರೀವೈಷ್ಣವ ಬ್ರಾಹ್ಮಣನನ್ನು ಕರೆಯಿಸಿ ಆಗ್ರ ಹಮಾಡಿ ಅವನಿಗೆ ಸಂಬಳವನ್ನು ಕಿತ್ತುಹಾಕಿ ಅವನನ್ನು ಅರಮನೆಯಿಂದ ಆಚೆಗೆ ತಳ್ಳಿಸಿದರು. ಕೊನೆಗೆ ಆ ಬ್ರಾ ಹ್ಮಣನು ರಾಮಶಾಸ್ತ್ರಿಗಳಲ್ಲಿ ಬಂದು ಕಾದು ಅವರಿಗೆ

ಪಾದಾಕ್ರಾಂತನಾಗಿ ತನ್ನಿಂದ ತಪ್ಪಾಯಿತೆಂದು ಹೇಳಿಕೊಂಡನು. ಆಗ ಶಾಸ್ತ್ರಿಗಳೇ ಮಹಾರಾಜರಲ್ಲಿ ಅರಿಕೇಮಾಡಿ ಅವನ ಸಂಬಳವನ್ನು ಎಂದಿನಂತೆ ಕೊಡಿಸಿದರು. ಇಂಥಾ ಸಂದರ್ಭದಲ್ಲಿಮಾತ್ರ ಶಾಸ್ತ್ರಿಗಳಿಗೆ ಕೋಪಬರುತಿತ್ತು.

ಶಾಸ್ತ್ರಿಗಳು ಯಾವಾಗಲೂ ಸಂತೋಷಚಿತ್ತರಾಗಿಯೇ ಇರುತಿದ್ದರು. ಶಿಷ್ಯರಲ್ಲಿ ಕೇವಲ ಸಲಿಗೆಯಾಗಿಯೂ ಹಾಸ್ಯವಾಗಿಯೂ ಮಾತನಾಡುತಾ ಅವರನ್ನು ಸ್ನೇಹಿತರಂತೆ ಕಾಣುತಿದ್ದರು. ಕಾಡಿಗೆ ವಿದ್ಯಾರ್ಥಿಗಳೆಲ್ಲರನ್ನೂ ಕರೆದುಕೊಂಡುಹೋಗಿ ಒಂದುಬಗೆ ಮುಳ್ಳುಕಾಯಿಯನ್ನು ಕಿತ್ತು ಅದನ್ನು ದೂರವಾಗಿ ಎಸೆಯುವದು ; ಅದರ ಹಿಂದೆಯೇ ಶಿಷ್ಯರೆಲ್ಲರೂ ಓಡಿಹೋಗಿ ಅದನ್ನು ಹಿಡಿಯುವುದು ; ಮೊದಲು ಅದನ್ನು ಹಿಡಿದು ತಂದವನು ಧೀರ ಎನ್ನುವುದು ; ಹೀಗೆ ನಡೆಯುತಿತ್ತು. ಶಿಷ್ಯರೂ ಹಿಂದೆಯೇ ಓಡಿಹೋಗಿ ಆ ಕಾಯಿಯನ್ನು ಹಿಡಿಯಲು ಒದ್ದಾಡುತಿದ್ದರು. ಆ ಕಾಯಿಯನ್ನು ಆತುರದಲ್ಲಿ ಹಿಡಿದುಕೊಂಡರೆ ಮುಳ್ಳು ಕೈಗೆ ಚುಚ್ಚುತಿತ್ತು. ಅದನ್ನು ಕಂಡು ಇತರರೆಲ್ಲರೂ ನಗುತಾ ವಿನೋದವಾಗಿ ಕಾಲವನ್ನು ಕಳೆಯುತಿದ್ದರು. ವಿದ್ಯಾರ್ಥಿಗಳಿಗೆ ಅಂಗಸಾಧಕವೂ ವಿನೋದವೂ ಸಹಾ ಇದರಿಂದ ಆಗುತಾ ಅವರ ಅಸಹ್ಯ ಹೋಗುತಾ ಇತ್ತು.

ಬಿಕ್ಕಲಾಗಿರುವ ಶಿಷ್ಯರನ್ನು ಹುಡುಕಿ ಅವರವರಿಗೆ ವಾಕ್ಯಾರ್ಥಕ್ಕೆ ಕೂರಿಸುತ್ತಿದ್ದರು. ಭಾದ್ರಪದ ಮಾಸದಲ್ಲಿ ಮಾಡುತಾ ಇದ್ದ ಗಣೇಶನ ಮಂಗಳಾರ್ತಿಕಾಲದಲ್ಲಿ ಸೇರಿದ ಸಭೆಯವರ ವಿನೋದಾರ್ಥವಾಗಿ ಹೀಗೆ ಮಾಡುತಾ ಇದ್ದರು. ಮಾತು ಹೊರಡದೆ ತತ್ತರಿಸಿಕೊಂಡು ಗಳಿಗೆಗೆ ಒಂದು ಶಬ್ದವನ್ನು ಉಚ್ಚರಿಸುತಾ ನಡಿಸುತ್ತಿದ್ದ ವಾಕ್ಯಾರ್ಥವು ಎಂಥವರನ್ನೂ ನಗಿಸುತ್ತಿತ್ತು.

ಇದೂ ಅಲ್ಲದೆ ಶಾಸ್ತ್ರಿಗಳು ಮನಸ್ಸು ಬಂದಾಗ ಕೆಲವರನ್ನು ಕುಚೋದ್ಯಮಾಡಿ ಇತರರನ್ನು ನಗಿಸುವ ವಾಡಿಕೆ ಯಾವಾಗಲೂ ಉಂಟು. ಕೋಲಾರದ ಒಬ್ಬ ಬ್ರಾಹ್ಮಣನು ಮಹಾ ಪುರುಷನೆಂದು ಹೆಸರಿಟ್ಟುಕೊಂಡು, ಆಗಾಗ್ಗೆ ಶಾಸ್ತ್ರಿಗಳಲ್ಲಿ ಬರುತಾ ಇದ್ದನು. ಈತನಿಗೆ ಬುದ್ಧಿ ಸ್ವಲ್ಪ ಭ್ರಮೆಯಾಗಿತ್ತು. ತಾನು ಸರ್ವಜ್ಞನೆಂತಲೂ ಪ್ರಳಯವಾಗುವಂತೆ ಮಾಡುತೇನೆಂತಲೂ ಮನಸ್ಸು ಬಂದಹಾಗೆ ಮಾತನಾಡುತಾ ಇದ್ದನು. ಗೋದಾವರೀ ವೆಂಕಟಶಾಸ್ತ್ರಿ ಎಂಬ ಇನ್ನೊಬ್ಬ ಬ್ರಾಹ್ಮಣ ಇದ್ದನು. ಇವನು ವ್ಯಾಕರಣಶಾಸ್ತ್ರವನ್ನು ಚೆನ್ನಾಗಿ ಬಲ್ಲವನು. ಇವನು ಕೋಟಿ ಬ್ರಾಹ್ಮಣಸಂತರ್ಪಣೆಯನ್ನು ಮಾಡುತೇನೆಂದು ಹೇಳಿಕೊಳ್ಳುತಾ ಅದಕ್ಕೆ ಉಪಾಯವನ್ನು ಹೇಳಿಕೊಡಬೇಕೆಂದು ದಾ

ಮಶಾಸ್ತ್ರಿಗಳನ್ನು ಕೇಳುತಾ ಇದ್ದನು. ಅದಕ್ಕೆ ರಾಮಶಾಸ್ತ್ರಿಗಳು—ಒಂದು ದೊಡ್ಡ ಪಾತ್ರೆಗೆ ಅಕ್ಷಯಪಾತ್ರೆ ಎಂದು ಹೆಸರಿಟ್ಟು ಅದನ್ನು ತಲೇಮೇಲೆ ಹೊತ್ತುಕೊಂಡು ತಿರುಗಿದರೆ ಹಿಡಿ ಅಕ್ಕಿಯನ್ನು ಯಾರಾದರೂ ಹಾಕುತಾರೆ, ಅದರಿಂದ ಕೋಟಿಬ್ರಾಹ್ಮಣ ಸಂತರ್ಪಣೆ ಮಾಡಬಹುದು ಎಂದು ಶಾಸ್ತ್ರಿಗಳು ಅವನಿಗೆ ಹೇಳಕೊಟ್ಟರು. ಅದರಂತೆ ಆ ವೆಂಕಟಶಾಸ್ತ್ರಿ ಮಾಡುತಾ ಬಂದನು. ಇವನನ್ನು ಕಂಡಾಗಲೆಲ್ಲಾ ರಾಮಶಾಸ್ತ್ರಿಗಳು ಎಷ್ಟು ಶೇಖರವಾಯಿತು, ಎಷ್ಟು ಲಕ್ಷ ಬ್ರಾಹ್ಮಣರಿಗೆ ಸಂತರ್ಪಣೆಯಾಯಿತು, ಇನ್ನೆಷ್ಟು ಲಕ್ಷ ಉಳಿದಿದೆ? ಎನ್ನುತಿದ್ದರು. ಇಂಥವರು ಗೇಲಿಗೆ ವಿಷಯರಾಗಿದ್ದರು. ಯಾವಾಗಲೂ ದೊಡ್ಡ ವಿಷಯಗಳನ್ನೇ ಯೋಚಿಸುತಾ ಬುದ್ಧಿಗೆ ವಿಶೇಷವಾಗಿ ಕ್ಲೇಶವುಂಟಾಗುವಂಥಾ ಪ್ರತಿಭಾವಿಶಿಷ್ಟರಿಗೆ ಬುದ್ಧಿಯು ಒಂದೇಕಡೆ ಲೀನವಾಗಿ ಭ್ರಮೆಗೊಳ್ಳದೆ ಸಮತೂಕದಲ್ಲಿ ಇರುವುದಕ್ಕಾಗಿ ಇಂಥಾ ವಿನೋದಗಳು ಅಗತ್ಯವಾಗಿವೆ.

ಇವರ ಮನಸ್ಸಿನಲ್ಲಿ ಕೆಲವು ಉದ್ದೇಶಗಳು ಇದ್ದವು. ತರ್ಕ ವೇದಾಂತಶಾಸ್ತ್ರಗಳಲ್ಲಿ ಅನೇಕಜನ ಶಿಷ್ಯರಿಗೆ ಪಾಂಡಿತ್ಯವುಂಟಾಗುವಂತೆ ಮಾಡಿ ದೇಶಾಂತರಗಳಿಗೂ ಇವರನ್ನು ಕಳುಹಿಸಬೇಕೆಂದು ಯೋಚಿಸಿದ್ದರು. ಇದು ನೆರ

ವೇರಿದಂತೆಯೇ ಆಯಿತು. ಈಗಲೂ ಮೈಸೂರ ಸೀಮೆಯಲ್ಲಿಯೂ ದಕ್ಷಿಣದೇಶದಲ್ಲಿಯೂ ತಾರ್ಕಿಕರು, ವೇದಾಂತಶಾಸ್ತ್ರಜ್ಞರು ಎಂದು ಹೆಸರಾದವರೆಲ್ಲಾ ರಾಮಶಾಸ್ತ್ರಿಗಳ ಶಿಷ್ಯರು ಪ್ರಶಿಷ್ಯರು ಅವರ ಶಿಷ್ಯರು ಇವರೇ ಆಗಿದಾರೆ. ಇವರು ಬರೆದ ಶತಕೋಟಿ, ವ್ಯುತ್ಪತ್ತಿವಾದ, ಪಂಚವಾದಗಳು, ಉತ್ತರವಾದ, ಇತರ ಅನೇಕ ಕ್ರೋಡಪತ್ರಗಳು, ಇವುಗಳನ್ನೆಲ್ಲಾ ನವದ್ವೀಪ, ಕಾಶಿ, ದರಭಂಗ, ಮುಂತಾದ ಸಂಸ್ಕೃತ ಪಾಂಡಿತ್ಯಕ್ಕೆ ಉತ್ತರದೇಶದಲ್ಲಿ ಮೂಲಸ್ಥಾನವಾಗಿರುವಕಡೆ ಎಲ್ಲಾ ವಿದ್ಯಾರ್ಥಿಗಳೂ ಓದಿ ಪಂಡಿತರಾಗುತಿದಾರೆ.

ಎಲ್ಲಾ ಕ್ರತುಗಳನ್ನೂ ಸಾಂಗವಾಗಿ ಮಾಡಬೇಕೆಂಬುವುದು ಇವರ ಎರಡನೇ ಆಶೆಯಾಗಿತ್ತು. ಕೃಷ್ಣರಾಜ ಒಡೆಯರ ಗೌರವಕ್ಕೆ ಪಾತ್ರರಾಗಿದ್ದ ರಾಮಶಾಸ್ತ್ರಿಗಳಿಗೆ ಇದು ಹೆಚ್ಚಾಗಿರಲಿಲ್ಲ. ಮಧ್ಯಕಾಲದಲ್ಲಿ ದೈವಗತಿ ಬೇರೆಯಾಯಿತು. ಅಷ್ಟರಲ್ಲಿಯೇ ಶಾಸ್ತ್ರಿಗಳಿಗೆ ಅವಸಾನಕಾಲವು ಅಕಸ್ಮಾತ್ತಾಗಿ ಪ್ರಾಪ್ತವಾದ್ದರಿಂದ ಈ ಕೋರಿಕೆಯೂ ಮತ್ತೂ ತಮ್ಮ ೬೦ ನೇ ವಯಸ್ಸಿನಲ್ಲಿ ಆಶ್ರಮಸ್ವೀಕಾರಮಾಡಿ ಕಾಶಿಗೆ ಹೊರಟುಹೋಗಬೇಕೆಂಬ ಇವರ ಕೊನೇ ಉದ್ದೇಶವೂ ಸಾಗದೇಹೋದವು.

ಯಡತೊರೆಯಲ್ಲಿ ಶಾಸ್ತ್ರಿಗಳಿಗೆ ಒಂದು ಭೂಸ್ಥಿತಿ ಇತ್ತಂತೆ. ಅದರಿಂದ ಬರುತಾಇದ್ದ ಬತ್ತವೂ, ಪರಕಾಲ ಮಠ ಅರಮನೆ ಮೊದಲಾದಕಡೆಯಿಂದ ಬರುತಾಇದ್ದ ಸಂಬಳವೂ, ಬಹುಮಾನಗಳೂ, ದೇಶಾಂತರಗಳಲ್ಲಿ ಸಭೆಗಳಾಗಿ ಅಲ್ಲಿ ದೊರೆಯುತಿದ್ದ ಸಂಭಾವನೆಯೂ ಇವರ ವೆಚ್ಚಕ್ಕೆ ಸಾಕಾಗುತ್ತಲೇ ಇರಲಿಲ್ಲ. ಆಗಾಗ್ಗೆ ಸಾಲವನ್ನು ಮಾಡುತಾ ಇದ್ದರು. ಈ ಸಾಲವು ಒಂದುಸಾವಿರ ರೂಪಾಯಿ ಆದ ಒಡನೆಯೇ ಸಂಚಾರ ಹೊರಡುತಾ ಇದ್ದರು. ಕಾಶೀಪತಿಶಾಸ್ತ್ರಿ, ಕಾಶೀಶೇಷಶಾಸ್ತ್ರಿ, ಇವರಿಬ್ಬರೂ ರಾಮಶಾಸ್ತ್ರಿಗಳಿಗೆ ಸಾಲವನ್ನು ಕೊಡುವ ಸಾಹುಕಾರರು. ಇವರಿಬ್ಬರೂ ಮತ್ತು ಛತ್ರದ ಬೀದಿಯಲ್ಲಿದ್ದ ತೊಗಿರೆ ಸಾಂಬಮೂರ್ತಿಶಾಸ್ತ್ರಿಗಳು, ತೊಗಿರೆ ಸುಬ್ಬಶಾಸ್ತ್ರಿಗಳು, ಇವರೇ ರಾಮಶಾಸ್ತ್ರಿಗಳಿಗೆ ಮುಖ್ಯ ಸ್ನೇಹಿತರು. ಶಾಸ್ತ್ರಿಗಳು ಕಾಲವಾಗುವಾಗ್ಗೆ ಕಾಶೀಪತಿಶಾಸ್ತ್ರಿಗೆ ೩,೦೦೦ ರೂಪಾಯಿ ಸಾಲಾ ಕೊಡಬೇಕಾಗಿತ್ತು.

ರಾಮಶಾಸ್ತ್ರಿಗಳ ಸಮಕಾಲಿಕರಾಗಿ ಸ್ವತಃ ಪಂಡಿತರೆನಿಸಿಕೊಂಡಿದ್ದ ಅನೇಕ ಜನರು ಇವರ ಪ್ರತಿಭೆಯನ್ನು ಕೊಂಡಾಡುತಲೇ ಇದ್ದರು. ಒಂದಾನೊಂದುಸಾರಿ ತೆಂಗಲೆ ಶ್ರೀವೈಷ್ಣವ ಪಂಡಿತರಾದ ಗೋವರ್ಧನರಂಗಾಚಾರ್ಯರೆಂ

ಬುವರಿಗೂ ರಾಮಶಾಸ್ತ್ರಿಗಳಿಗೂ ಅರಮನೆಯಲ್ಲಿ ವಾಕ್ಯಾರ್ಥವಾಯಿತು. ಆಗ ಮಾನವಾಡಿ ಮಧ್ವಾಚಾರ್ಯರೆಂಬ ವೈಷ್ಣವ ವಿದ್ವಾಂಸರು ರಾಮಶಾಸ್ತ್ರಿಗಳನ್ನು ಪ್ರತಿಭಟಿಸುತಾ ಪರಪಕ್ಷಕ್ಕೆ ಸಹಾಯಕರಾಗಿ ಕೂತುಕೊಂಡರು. ಮಧ್ವಮತದ ಆನಂದತೀರ್ಥರ ಸಿದ್ಧಾಂತವನ್ನು ಉಪಪಾದನಮಾಡಿ ಹೇಳುವಾಗ್ಗೆ, ರಾಮಶಾಸ್ತ್ರಿಗಳ ಕೋಟಿಗೆ ಉತ್ತರ ಕೊಡುವುದಕ್ಕೆ ಬದಲಾಗಿ—ಮಾಧ್ವಮತ ಸಿದ್ಧಾಂತವು ನಿಮಗೆ ಗೊತ್ತಿಲ್ಲ, ಇದು ತರ್ಕಪದ್ಧತಿಯಲ್ಲ, ಎಂದು ಮಾನವಾಡಿ ಮಧ್ವಾಚಾರ್ಯರು ಹೇಳಿದರು. ಆ ಮಾತನ್ನು ಸಹಿಸಲಾರದೆ ಆ ಸಭೆಯಲ್ಲಿದ್ದ ಕಾಶೀ ಶೇಷಶಾಸ್ತ್ರಿಗಳು—ರಾಮಶಾಸ್ತ್ರಿಗಳು ಉಚ್ಚರಿಸಿದಮಾತ್ರದಲ್ಲಿಯೇ ಮಾಧ್ವಮತ ಶುದ್ಧವಾಯಿತೆಂದು ತಿಳಿಯಿರಿ, ಆಚಾರ್ಯರೆ, ಈ ದಕ್ಷಿಣಾಮೂರ್ತಿಯ ಎದುರಿಗೆ ಆ ಪ್ರಲಾಪ ಪ್ರಯೋಜನವಿಲ್ಲ ಎಂದರು.

ಶಾಸ್ತ್ರಿಗಳ ವಶಕ್ಕೆ ಯಾವ ಹಣ ಬಂದಾಗ್ಯೂ ಅದನ್ನು ತಾವು ಹತ್ತಿರ ಇರಿಸಿಕೊಳ್ಳುತಾ ಇರಲಿಲ್ಲ. ಬಂದ ಹಣವನ್ನು ಇತರರ ವಶಕ್ಕೆ ಕೊಟ್ಟುಬಿಡುತಿದ್ದರು. ಸಮಯ ಬಂದಹಾಗೆ ಹಣವೆಲ್ಲಾ ವೆಚ್ಚವಾಗಿ ಹೋದಮೇಲೆ ಬೇರೇ ಹಣವನ್ನು ತರಿಸುತಾ ಇದ್ದರಲ್ಲದೆ ಮೊದಲು ಕೊಟ್ಟ ಹಣಕ್ಕೆ ಲೆಕ್ಕವನ್ನು ಕೇಳುತಾ ಇರಲಿಲ್ಲ. ಜನರನ್ನು

ಹೆಚ್ಚಾಗಿ ನಂಬುತಾ ಇದ್ದರು. ತಮಗೆ ಯಾರೂ ಮೋಸಮಾಡುವುದಿಲ್ಲವೆಂದು ತಿಳಿದಿದ್ದರು. ಸಾಧಾರಣವಾಗಿ ಚಿತ್ತಸ್ಥೈರ್ಯವು ಗ್ರಂಥವ್ಯಾಸಂಗಕ್ಕೂ ತಪಸ್ಸಿಗೂ ಅಗತ್ಯವಾದ್ದು. ಹಣವನ್ನು ಹತ್ತಿರ ಇರಿಸಿಕೊಂಡು ಕಟ್ಟಿ ಬಿಚ್ಚಿ ಮಾಡುವುದರಲ್ಲಿ, ವೆಚ್ಚವಾದರೆ ಚಿಂತೆಯೂ ಶೇಖರವಾದರೆ ಆನಂದವೂ, ಉಂಟಾಗುವುದು. ಅದರ ಯೋಚನೆಯೇ ಮನುಷ್ಯನ ಕಾಲವನ್ನು ಹೋಗಲಾಡಿಸಿ ಇಲ್ಲದ ಮನೋವಿಕಾರಗಳನ್ನುಂಟುಮಾಡುವುದು. ಇದರಿಂದ ಚಿತ್ತ ಸ್ಥಿರವಾಗಿ ನಿಲ್ಲದೆ ಸುಳಿಗಾಳಿಗೆ ಸಿಡಿದ ದೀಪದಂತಾಗುವುದು.

ರಾಮಶಾಸ್ತ್ರಿಗಳಿಗೆ ಲಕ್ಷ್ಮೀನರಸಿಂಹಶಾಸ್ತ್ರಿ, ಯಜ್ಞನಾರಾಯಣಶಾಸ್ತ್ರಿ, ಶಿವಸ್ವಾಮಿ ಎಂದು ಮೂರುಜನ ಗಂಡುಮಕ್ಕಳು ಇದ್ದರು. ಶ್ರೀಲಕ್ಷ್ಮೀ ಎಂಬ ಒಬ್ಬ ಹೆಣ್ಣು ಮಗಳು ಇದ್ದಳು. ಹೆಣ್ಣುಮಗಳು ಪರೀಧಾವಿ ಸಂವತ್ಸರದಲ್ಲಿ ನಂಜನಗೂಡಿನಲ್ಲಿ ಹುಟ್ಟಿದಳು. ಈಕೆಯನ್ನು ಕೋಣನೂರು ಶಾಮಶಾಸ್ತ್ರಿಗಳಮನೆಗೆ ಕೊಟ್ಟು ಮದವೆಯಾಗಿತ್ತು. ರಕ್ತಾಕ್ಷಿ ಸಂವತ್ಸರದಲ್ಲಿ ಈ ಶ್ರೀಲಕ್ಷ್ಮಿಯೂ ನಡಕಲ ಮಗನಾದ ಯಜ್ಞನಾರಾಯಣನೂ ಒಂದೇದಿವಸ ಮೃತರಾದರು. ಉಳಿದ ಇಬ್ಬರು ಗಂಡುಮಕ್ಕಳ ವಿಷಯ ವನ್ನು ಹಿಂದೆ ಬರೆದಿದೆ. ಲಕ್ಷ್ಮೀನರಸಿಂಹಶಾಸ್ತ್ರಿಗಳ ಮ

ಖ್ಯಾತ ರಾಮಶಾಸ್ತ್ರಿಗಳು ಅರಮನೆಯಲ್ಲಿ ಈಗಲೂ ಧರ್ಮಾಧಿಕಾರಿಗಳಾಗಿದಾರೆ.

## ೧೨ನೇ ಅಧ್ಯಾಯ.

### ಗು ಣಾ ತಿ ಶ ಯ ಗ ಳು. (೨)

ರಾಮಶಾಸ್ತ್ರಿಗಳಲ್ಲಿ ಇನ್ನೊಂದು ದೊಡ್ಡಗುಣವಿತ್ತು. ಇವರು ಎಂದಿಗೂ ಸುಳ್ಳನ್ನು ಹೇಳುತ್ತಿರಲಿಲ್ಲ. ಯಾವ ಸಂದರ್ಭದಲ್ಲಿಯಾದಾಗ್ಯೂ ಸತ್ಯವನ್ನೇ ಹೇಳುತಿದ್ದರು. ಹುಡುಗರ ಚೇಷ್ಟೆಯನ್ನು ತಪ್ಪಿಸುವುದಕ್ಕೂ, ಹುಚ್ಚರಿಗೂ, ಪರಿಹಾಸ್ಯಕ್ಕೂ ಕೂಡ ಅನೃತವನ್ನು ಆಡಕೂಡದೆಂಬುವುದು ಇವರ ಸಿದ್ಧಾಂತವಾಗಿತ್ತು. ಸುಳ್ಳನ್ನು ಹೇಳುವುದರಲ್ಲಿ ಅನೇಕ ಪಾಪಸಂಘಟನೆಯಾಗುವುದು. ನಿಶ್ಚಯಕ್ಕೆ ಪರಹಿತವೂ ಸುಳ್ಳಿಗೆ ಪರಹಿಂಸೆಯೂ ಮುಖ್ಯವಾದ ಆಧಾರವೆಂದು ತಿಳಿಯಬೇಕು. ಪರರು ಎನ್ನುವುದರಲ್ಲಿ ಒಬ್ಬಿಬ್ಬರನ್ನು ತೆಗೆದುಕೊಳ್ಳಬಾರದು. ಜನಸಮುದಾಯವೆಲ್ಲವನ್ನೂ ತೆಗೆದುಕೊಳ್ಳಬೇಕು. ಇನ್ನೂ ವಿಶಾಲಹೃದಯರು ಈ ಬ್ರಹ್ಮಾಂಡದ ಪ್ರಾಣಿವರ್ಗವೆಲ್ಲವನ್ನೂ ಸೇರಿಸಿಕೊಳ್ಳುವರು. ಅನೃತವನ್ನು ಆಡುವುದರಲ್ಲಿ ಕೊನೇ ಉದ್ದೇಶ ಒಳ್ಳೆಯದಾಗಿದ್ದರೆ ಅದನ್ನು ಆಡಬಹುದೆಂದು ಕೆಲವರು

ನಿಷ್ಕರ್ಷೆ ಮಾಡಿಕೊಂಡಿದಾರೆ. ಪೊಲೀಸಿನವರು ಅಪರಾಧಿಗಳಿಗೆ ಸುಳ್ಳನ್ನು ಹೇಳಿಕೊಟ್ಟು ಆಶೆಯನ್ನು ಹುಟ್ಟಸಿ ಮೊದಲು ನಂಬಿಕೆಯನ್ನು ತೋರಿಸಿ ಶಿಕ್ಷೆಯನ್ನು ಮಾಡಿಸುವರು. ಅಪರಾಧಿಗೆ ಶಿಕ್ಷೆಯಾಗುವುದು ನ್ಯಾಯವೇ ಆದಾಗ್ಯೂ, ಪೊಲೀಸಿನವರ ಹಿಂಸೆಯನ್ನು ತಡೆಯಲಾರದೆ ಸುಳ್ಳಿಗೆ ಸುಳ್ಳನ್ನು ಅವರ ಸಂಗಡ ಹೇಳಿ, ಜನರು ನಿರಪರಾಧಿಗಳನ್ನು ಸಿಕ್ಕಿಸಿ ಹಿಂಸೆಯನ್ನು ಮಾಡಿಸುವಕಾರಣ, ಪೊಲೀಸಿನವರು ಹೇಳುವ ಈ ಬಗೆ ಸುಳ್ಳಿಗೆ ಧರ್ಮಶಾಸ್ತ್ರಜ್ಞರೂ ನ್ಯಾಯವಿಧಾಯಕರೂ ಒಪ್ಪುವುದಿಲ್ಲ. ಒಂದುವೇಳೆ ನಿಜವಾದ ಅಪರಾಧಿಗೆ ಶಿಕ್ಷೆಯಾದಾಗ್ಯೂ, ಅದರಿಂದ ಉಂಟಾಗುವ ಪರೋಪಕಾರವು ಮಿಥ್ಯೆ ಹೇಳಿದ ಸುಳ್ಳಿನ ಫಲವಾಗಿ ಹುಟ್ಟುವ ಪರಹಿಂಸೆಗಿಂತ ಬಹಳ ಕಡಮೆಯಾಗಿಯೇ ಪರಿಣಮಿಸುವುದರಿಂದ, ಅನೃತವು ತನ್ನ ನಿಜವಾದ ಫಲವನ್ನೇ ಕೊಟ್ಟಂತೆಯಾಗುವುದು. ರಾಜಕೀಯವ್ಯಾಪಾರದಲ್ಲಿಯೂ ಅಧಿಕಾರಿಗಳು ಕೆಲವರು ತಾವು ಲೋಕಕ್ಕೆ ಉಪಕಾರಮಾಡುವೆವೆಂಬ ನೆಪದಮೇಲೆ, ಅದನ್ನು ನೆರವೇರಿಸಿಕೊಳ್ಳಲು ತಾವು ಯಾವ ಮಾರ್ಗವನ್ನು ಹಿಡಿದಾಗ್ಯೂ ಸಲ್ಲುವುದೆಂದು ತಿಳಿಯುವರು. ಆ ಮಾರ್ಗದಿಂದ ಒಂದು ಒಳ್ಳೆಯದಾದರೆ ಒಂಭತ್ತು ಕೇಡಾಗುವುದು.

ಮೃಷಾಸ್ತುತಿಯಲ್ಲಿಯೂ ಪರಹಿಂಸೆ ಇಲ್ಲದೆ ಸ್ವಪ್ರಯೋಜನವು ಕೈಗೂಡುವುದೆಂತಲೂ, ಆದ್ದರಿಂದ ಅದು ನಿಂದ್ಯವಲ್ಲವೆಂತಲೂ ಹೇಳುತಾರೆ. ಇಲ್ಲದ ಗುಣವನ್ನು ಆರೋಪಿಸಿ ಹೊಗಳಿದರೆ, ಅಂಥಾ ಗುಣವು ತನ್ನಲ್ಲಿದೆ ಎಂತಲೂ, ತಾನು ಪರ್ವತಕ್ಕೆ ಸಮಾನವಾದ ಪುರುಷನೆಂತಲೂ ತಿಳಿದುಕೊಳ್ಳುವ ಗಾಂಪರು ಲೋಕದಲ್ಲಿ ಅನೇಕರುಂಟು. ಇಂಥ ದುರಹಂಕಾರಿಗಳು ಹೆಚ್ಚಾದ ಕೇಡನ್ನು ಮಾಡಿದರೆ, ಅದಕ್ಕೆ ಮೊದಲು ಮಾಡಿದ ಮೃಷಾಸ್ತುತಿಯೇ ಬೀಜವಾಗುವುದು.

ಸಾವಿರ ಸುಳ್ಳ ಹೇಳಿ ಒಂದು ಮನವೇಮಾಡು, ಸಾವಿರ ಸುಳ್ಳಹೇಳಿ ಒಬ್ಬನ ಪ್ರಾಣವನ್ನು ಉಳಿಸು, ಎಂದು ಸಾಧಾರಣ ಜನರು ಹೇಳುವ ಮಾತು ಕೇವಲ ನೀತಿಬೋಧಕವೆಂದು ಕೆಲವರು ತಿಳಿಯಬಹುದು. ಇಂಥಾ ಸಂದರ್ಭದಲ್ಲಿ ಸುಳ್ಳನ್ನು ಹೇಳಬೇಕಾದರೆ ದೋಷವಿದೆ ಎಂದು ಒಪ್ಪಿದಹಾಗಾಯಿತು. ಇರುವುದನ್ನು ಮರೆಮಾಚಿ ಸುಳ್ಳನ್ನು ಹೇಳಿದರೆ ದೋಷವು ತನ್ನ ಫಲವನ್ನು ಎಂದಿಗಾದರೂ ತೋರಿಸಿದಲ್ಲಿ, ಅಂಥಾ ಪಾಪಕ್ಕೆ ಮೊದಲು ಯಾರ ಮಾತು ಕಾರಣವಾಯಿತೋ ಅವರು ಭಾಗಿಗಳಾಗಬೇಕು. ಆದರೆ ಈ ಸುಳ್ಳಿನಿಂದ ಯಾರು ಪ್ರಯೋಜನವನ್ನು ಪಡೆಯುತಾ

ರೋ ಅವರು ಮೊದಲಿನಿಂದಲೂ ನಿರಪರಾಧಿಗಳಾಗಿದ್ದರೆ ಅಥವಾ ಅವರಲ್ಲಿ ದೋಷವಿಲ್ಲದಿದ್ದರೆ, ನಾವು ಸುಳ್ಳನ್ನು ಹೇಳಿ ಅವರಿಗೆ ಉಪಕಾರ ಮಾಡಬೇಕೆ, ಬಿಡಬೇಕೆ? ಇದು ಧರ್ಮಸೂಕ್ಷ್ಮವಿಚಾರವಾಗಿದೆ.

ಅತಿಶಯೋಕ್ತಿಯಲ್ಲಿ, ಹಾಸ್ಯದಲ್ಲಿ, ಗಾಬರಿಯಲ್ಲಿ, ಬರುವ ಅನೃತವು ಬುದ್ಧಿಪುರಸ್ಸರವಾಗಿ ಹುಟ್ಟುವುದಿಲ್ಲ. ಫಲದಲ್ಲಿಯೂ ಪ್ರಮಾದಜನಕವಲ್ಲ. ಆದ್ದರಿಂದ ಇದು ವಾಡಿಕೆಯಲ್ಲಿ ದೋಷವೆಂದು ಪರಿಗಣನೆಗೆ ಬರಲಿಲ್ಲ. ಒಂದು ವೇಳೆ ಪ್ರಮಾದವುಂಟಾದರೆ, ಸುಳ್ಳು ತನ್ನ ಸಹಜವಾದ ಕಾರ್ಯವನ್ನೇ ತೋರಿಸಿದಂತೆ ಆಗುತ್ತೆ.

ಪಾಶ್ಚಾತ್ಯರಲ್ಲಿ ಕರೀಸುಳ್ಳೆಂತಲೂ ಬಿಳೀಸುಳ್ಳೆಂತಲೂ ಸಾಧಾರಣ ಜನರು ಹೇಳಿಕೊಳ್ಳುವರು. ಪರಹಿಂಸೆಯಲ್ಲಿ ಕೊನೆಗಾಣುವ ಸುಳ್ಳು ಕರೀಸುಳ್ಳೆಂತಲೂ, ಪರಹಿಂಸೆ ಇಲ್ಲದ ಸುಳ್ಳು ಬಿಳೀ ಸುಳ್ಳೆಂತಲೂ, ಮೊದಲನೇತರದ ಸುಳ್ಳನ್ನು ಎಂದಿಗೂ ಹೇಳಕೂಡದೆಂತಲೂ, ಎರಡನೇತರದ ಸುಳ್ಳನ್ನು ಸಮಯಬಂದಾಗ ಹೇಳಬಹುದೆಂತಲೂ ಆ ಜನರು ವಾದಿಸುವರು. ಬಿಳೀ ಸುಳ್ಳೆಂಬುವುದೂ ಕೂಡ ಮೇಲೆ ಹೇಳಿದಹಾಗೆ ಯಾವುದಾದರೂ ಒಂದು ರೀತಿಯಲ್ಲಿ ಲೋಕಕ್ಕೆ ಅಪಕಾರವನ್ನೇ ತರುವಕಾರಣ ಅದ

ನ್ನೂ ಆಚರಿಸಲಾಗದು. ಕೇವಲ ನಾಜೋಕಾದ ಪ್ರಮೇಯದಲ್ಲಿ ಸುಳ್ಳಿನಿಂದ ಯಾವಕೇಡೂ ಸಂಭವಿಸದಿದ್ದಾಗ್ಯೂ, ಯಾವುದಾದರೂ ಒಂದು ಸಂದರ್ಭ ಬಂದಾಗ ಸುಳ್ಳುಹೇಳತಕ್ಕವನೆಂದು ಪ್ರಸಿದ್ಧವಾದರೆ, ಹೇಳತಕ್ಕವನ ಗೌರವ ಹಾನಿಯಾಗುವುದು. ಇದು ಒಂದುಬಗೆಯಾದ ಕೇಡೇಸರಿ. ಕೊನೆಗೆ ಇಂಥಾ ಹುಳುಕು ಅದರಿಂದ ಹುಟ್ಟದೇ ಇದ್ದಾಗ್ಯೂ, ಯಾವವಿಧವಾಗಿಯಾದರೂ ಸರಿಯೆ ಸುಳ್ಳುಹೇಳುವ ಪದ್ಧತಿಯನ್ನೇ ಬಿಡಬೇಕೆಂಬುವುದು ರಾಮಶಾಸ್ತ್ರಿಗಳ ಮತವಾಗಿತ್ತು. ಯಾಕೆಂದರೆ ಇಂಥಾ ಕೆಟ್ಟವಾಡಿಕೆ ಇದ್ದಲ್ಲಿ ಜನರು ಅಪ್ರಬುದ್ಧರಾಗಿಯೋ ಅಥವಾ ಅಪಾರ್ಥವನ್ನು ಕಲ್ಪಿಸಿಕೊಂಡೋ ಪ್ರವಾದಗಳನ್ನು ನಮಗೆ ತಿಳಿಯದಹಾಗೆ ಹುಟ್ಟಿಸಬಹುದು. ಅದರ ಫಲಕ್ಕೆ ನಾವು ಭಾಗಿಗಳಾಗಬೇಕಾಗುತ್ತೆ. ಈ ಕಾರಣದಿಂದಲೇ ಯಾವಾಗಲೂ ಮನುಷ್ಯನು ಆಚರಿಸಲೆಂದು ವೇದದಲ್ಲಿ ಕೂಡ "ಸತ್ಯಂವದ, ಧರ್ಮಂಚರ" ಎಂದರೆ ಸತ್ಯವನ್ನು ಹೇಳು, ಧರ್ಮವಾಗಿ ನಡೆ, ಎಂದು ವಿಧಾಯಕವಾಗಿದೆ.

ಆದರೆ ಹೇಳಿದ ಸುಳ್ಳನ್ನು ಕೇಳತಕ್ಕವನ ಮನಸ್ಸಿಗೆ ಹೇಗೆ ತೋರುತ್ತೆಂಬ ಅಂಶವನ್ನು ಕುರಿತು ಯೋಚಿಸಲಾಗಿ ಇನ್ನೊಂದು ವಿಧವಾದ ವಿಚಾರಾಂಶ ಉಂಟು.

ಸತ್ಯಂಬ್ರೂಯಾತ್ಪ್ರಿಯಂಬ್ರೂಯಾನ್ನಬ್ರೂಯಾತ್ಸತ್ಯಮಪ್ರಿಯಂ ॥ ಪ್ರಿಯಂಚನಾನೃತಂಬ್ರೂಯಾ ತ್ಏಷಧರ್ಮಗತಿಃಪರಾ ॥

ಹೀಗೆಂದರೆ, ಸತ್ಯವನ್ನು ಹೇಳಬೇಕು, ಹಿತವನ್ನು ಹೇಳಬೇಕು , ಹಿತಕರವಲ್ಲದ ಸತ್ಯವನ್ನು ಹೇಳಬಾರದು ; ಹಿತಕರವಾದ ಅಸತ್ಯವನ್ನೂ ಹೇಳಬಾರದು ; ಇದೇ ಉತ್ತಮವಾದ ಧರ್ಮಸೂಕ್ಷ್ಮ ಈಪ್ರಕಾರ ಒಂದು ಮತ ಉಂಟು. ಸತ್ಯವು ಯಾವಾಗಲೂ ಹಿತವೇಸರಿ. ಆದರೆ ಕೊನೆಗೆ ಯಾರಿಗಾದರೂ ಸರಿಯೆ ಹಿತವಲ್ಲದ ಸತ್ಯವೂ ಉಂಟು. ಒಂದು ಪ್ರಶ್ನೆಗೆ ನಾವು ಉತ್ತರವನ್ನು ಕೊಟ್ಟೇ ತೀರಬೇಕೆಂದು ವಿಧಾಯಕವಾಗಿದ್ದಲ್ಲಿ ನಾವು ಹೇಳುವ ಮಾತು ಇತರರಿಗೆ ಹಿತಕರವಾಗಿರಲಿ ಇಲ್ಲದಿರಲಿ, ನಾವೇನೋ ನಿಶ್ಚಯವನ್ನು ಹೇಳಲೇಬೇಕು. ಹಾಗಿಲ್ಲದೆ ನಮಗೆ ಯಾವ ನಿರ್ಬಂಧವೂ ಇಲ್ಲದಿರುವಾಗ ಎಲ್ಲಾಕಾಲದಲ್ಲಿಯೂ ನಾವು ನಿಶ್ಚಯವನ್ನು ಎಲ್ಲರಿಗೂ ಕೇಳುವಹಾಗೆ ಆಡಬೇಕೆಂಬ ಕಡ್ಡಾಯವಿಲ್ಲ. ಮನುಷ್ಯಶರೀರದಲ್ಲಿ ಅನೇಕ ಹೊಲಸು ಇದೆ. ಮರ್ಮಸ್ಥಾನಗಳಿವೆ. ಇವುಗಳನ್ನು ವಿವರಿಸಿ ಹೇಳಿದರೆ ನಿಶ್ಚಯವನ್ನೇ ಹೇಳಿದಹಾಗಾಯಿತು. ಇದು ಯಾರಿಗೆ ತಿಳಿಯದು ? ಒಂದುವೇಳೆ ಕೆಲವರಿಗೆ ತಿಳಿಯ

ದೇ ಇದ್ದಾಗ್ಯೂ, ಇದೆಲ್ಲವನ್ನೂ ಹೆಂಗಸರುಗಂಡಸರಿಗೆ ಏಕರೀತಿಯಾಗಿ ವಿವರಿಸಿ ಹೇಳುವುದು ಗಂಭೀರಸ್ಥರಿಗೆ ಹಿತಕರವಾಗಿರಲಾರದು. ಇಂಥಾ ಸತ್ಯವನ್ನು ಹೇಳಬೇಕೆಂಬ ವಿಧಿಯೂ ಇಲ್ಲ. ಸುಮ್ಮನೇ ಇದ್ದರೆ ಯಾರಿಗೂ ಕೇಡಿಲ್ಲ. ಇಂಥಾ ಸಂದರ್ಭದಲ್ಲಿ ಈ ವಿಧವಾದ ಸತ್ಯವನ್ನು ಹೇಳಬೇಕಾದ್ದಿಲ್ಲ. ಆದರೆ ಇದೇ ವಿಷಯವನ್ನುಕುರಿತು ಒಂದು ನ್ಯಾಯಸ್ಥಾನದಲ್ಲಿ ವಿವರಿಸಿ ಹೇಳಲೇಬೇಕಾದ್ದು ಅಗತ್ಯವಾಗಿ, ಒಬ್ಬ ಮನುಷ್ಯನಿಗೆ ಶಿಕ್ಷೆಯಾಗಬೇಕಾದ್ದೋ ಬಿಡುಗಡೆಯಾಗಬೇಕಾದ್ದೋ ಪ್ರಸಕ್ತವಾಗಿದ್ದರೆ, ಆಗ ನಿಶ್ಚಯವನ್ನಾಡುವುದರಲ್ಲಿ ಸಿತಾಸಿತಗಳ ವಿವೇಚನೆ ಬರುವುದಿಲ್ಲ. ಉಳಿದ ಸಾಧಾರಣ ಸಮಯದಲ್ಲಿ ಈ ವಿಧಿಯು ನಿರ್ಬಂಧವಾಗಿಲ್ಲ. ಆದರೆ ದ್ರೋಣಾಚಾರ್ಯರ ಏಟು ಬಲವಾಗಲು ಪಾಂಡವರಿಗೆ ಸೋಲಾದೀತೆಂದು ಭಯತೋರಿತು. ದ್ರೋಣರು ಯುದ್ಧವನ್ನು ಮಾಡದೆಬಿಡಲಿ ಎನ್ನುವುದಕ್ಕಾಗಿ ಶ್ರೀಕೃಷ್ಣನು—ದ್ರೋಣರ ಮಗನಾದ ಅಶ್ವತ್ಥಾಮ ಸತ್ತನೆಂದು ಗಟ್ಟಿಯಾಗಿ ಕೂಗಿ ಹೇಳೆಂಬದಾಗಿ ಧರ್ಮರಾಯನಿಗೆ ಹೇಳಿದನಷ್ಟೆ. ಅಶ್ವತ್ಥಾಮ ಚಿರಂಜೀವಿಯಾದ್ದರಿಂದ ಅವನು ಸತ್ತನೆಂಬಮಾತು ಸುಳ್ಳೆಂದು ಧರ್ಮರಾಯ ಉತ್ತರಕೊಟ್ಟನು. ಆಗ ಅಶ್ವತ್ಥಾಮನೆಂಬ ಆನೆ ಸತ್ತಿತೆಂದು ಕೂಗು

ಎಂಬದಾಗಿ ಕೃಷ್ಣ ಹೇಳಿದಮಾತಿಗೆ ಧರ್ಮ ಒಪ್ಪಿದನು. ಪೂರ್ವ ವೃತ್ತಾಂತವನ್ನು ಯೋಚಿಸಲಾಗಿ ಅಶ್ವತ್ಥಾಮ ಹತನಾದನೆಂದು ಯಾವಪರ್ಯಾಯವಾಗಿ ತಾನು ಹೇಳಿದರೂ ದ್ರೋಣನಿಗೆ ಉಪಹತಿ ಉಂಟಾಗುವುದೆಂದು ಯುಧಿಷ್ಠಿರ ತಿಳಿದೇ ಇದ್ದನು. ಏವಂಚ ಆ ಹೆಸರಿನ ಆನೆ ಸತ್ತದ್ದೂ ನಿಜ, ಆ ಮಾತನ್ನು ಹೇಳಿದರೆ ಸುಳ್ಳಾಗುವುದೂ ಇಲ್ಲ. ಆದಾಗ್ಯೂ ಇದು ಅಪ್ರಿಯವಾದ ಸತ್ಯವೆನ್ನಿಸುವುದಕ್ಕೆ ಸಂಶಯವಿಲ್ಲ.

ಯಾವಾಗಲೂ ಸತ್ಯವನ್ನು ಹೇಳುತೇನೆಂಬ ಒಬ್ಬ ಬಡವನಾದ ಬ್ರಾಹ್ಮಣನಮನೆಗೆ ಕಳ್ಳರು ಬಿದ್ದರು. ನೆರೆ ಮನೆಯವರು ಐಶ್ವರ್ಯವಂತರಾಗಿದ್ದರು. ತನ್ನಮನೆಯಲ್ಲಿ ಕಳ್ಳತನಕ್ಕೆ ಬಂದ ಕಳ್ಳರನ್ನು ಕುರಿತು ಈ ದರಿದ್ರ ಬ್ರಾಹ್ಮಣನು—ನಾನು ಸತ್ಯವಾದಿ, ಆದರೆ ಬಡವ, ಮಗ್ಗುಲಮನೆಯವರು ಐಶ್ವರ್ಯವುಳ್ಳವರು ಎಂದು ಹೇಳಲಾಗಿ, ಕಳ್ಳರು ಮಗ್ಗುಲಮನೆಗೆ ನುಗ್ಗಿ ದೋಚಿಕೊಂಡುಹೋದರು. ನೆರೆಮನೆಯವರು ಭಾಗ್ಯವಂತರಾಗಿದ್ದದು ನಿಜ. ಆದರೆ ಈ ವಿಷಯವನ್ನು ಕಳ್ಳರು ಕೇಳದೇ ಇದ್ದರೂ ತಾನಾಗಿಯೇ ಈ ಬ್ರಾಹ್ಮಣ ಆಡಿದ ಸತ್ಯವು ಅಪ್ರಿಯವಾದ್ದೇ ಸರಿ. ಇಂಥಾ ಸತ್ಯವನ್ನು ಆಡದೆಹೋದ್ದರಿಂದ ಪಾಪವಿಲ್ಲ. ಆದಿ

ದ್ದರಿಂದ ಪಾಪ ಸಂಘಟಿಸುವುದು. ಇಂಥಾ ಸಂದರ್ಭದಲ್ಲಿ ಧರ್ಮಸೂಕ್ಷ್ಮ ವಿಚಾರವನ್ನು ಮಾಡತಕ್ಕದ್ದು ಅಗತ್ಯ.

ಪ್ರಿಯವಾದ ಸುಳ್ಳೆಂಬ ವರ್ಗಕ್ಕೆ ಮೃಷಾಸ್ತುತಿ, ಅತಿಶಯೋಕ್ತಿ ಮೊದಲಾದ್ದೂ ಸ್ವಲ್ಪ ಸಂಬಂಧಿಸುವವು. ಸುಳ್ಳನ್ನು ಹೇಳುವುದೇ ಪಾಪವೆಂದು ಇರುವಲ್ಲಿ ಅಪ್ರಿಯವಾದ ಸುಳ್ಳನ್ನು ಹೇಳುವುದು ಮತ್ತೂ ಹೇಯವಾದ್ದು. ಒಬ್ಬರಿಗೆ ಇದು ಪ್ರಿಯವಾಗಿದ್ದರೆ ಇನ್ನೊಬ್ಬರಿಗೆ ಅಪ್ರಿಯವಾಗುವುದು, ಕೇಡನ್ನು ತರುವುದು. ಮಕ್ಕಳಿಗೆ ಹಿತಕರವಾಗಿರುವಂತೆ ಕೆಲವರು ಸುಳ್ಳನ್ನು ಹೇಳುತಾರೆ. ಇಂಥಾ ಜನರು ದೂರದೃಷ್ಟಿ ಇಲ್ಲದವರೆಂದು ಖಂಡಿತವಾಗಿ ಹೇಳಬಹುದು. ಸದ್ಯಕ್ಕೆ ಹೇಳಿದ ಮಾತನ್ನು ಹುಡುಗರು ನಂಬಿದಾಗ್ಗೂ, ಅದು ಅನೃತವೆಂದು ಅವರಿಗೆ ಗೊತ್ತಾದರೆ, ನಮ್ಮ ಮಾತನ್ನು ಅವರು ನಂಬದೇ ಹೋಗುವುದರಿಂದ ಪ್ರಮಾದವುಂಟಾಗುವುದು. ಒಂದುವೇಳೆ ಹೀಗೆಯೇ ಆ ಬಾಲಕರೂ ಸುಳ್ಳಹೇಳುವ ಅಭ್ಯಾಸವನ್ನು ಮಾಡಿದರೆ ಆಗ ಹುಟ್ಟತಕ್ಕ ಅಪರಿಮಿತವಾದ ಕೇಡಿಗೆ ಕೊನೆಯೂ ಇಲ್ಲ ಮೊದಲೂ ಇಲ್ಲ. ಹುಚ್ಚರಸಂಗಡ ಆಡಬೇಕಾಗಿ ಬರುವ ಅನೃತಕ್ಕೆ ಫಲಾಫಲಗಳನ್ನು ಮುಂಚಿತವಾಗಿಯೇ ಗುಣಿಸಿಕೊಳ್ಳಬಹುದು.

ಮುಖ್ಯವಾಗಿ ನಿಶ್ಚಯವು ಸಹಜವಾದ ವೃತ್ತಿ. ಸುಳ್ಳು ಅಸಹಜವಾದ್ದು. ಸರಳವಾದ ಚರಿತ್ರೆಯುಳ್ಳವರಿಗೆ ಮೊದಲನೇದೂ, ವಕ್ರವಾದ ನಡತೆಯುಳ್ಳವರಿಗೆ ಎರಡನೇದೂ ಸಹಾ ಅಗತ್ಯವು. ಫಲಾಫಲ ವಿವೇಚನೆಇಲ್ಲದೆ ಮನುಷ್ಯನು ನಿಶ್ಚಯವನ್ನೇ ಆಡಬೇಕೆಂಬ ಮತವನ್ನುಬಿಟ್ಟು, ಫಲಪ್ರಾಪ್ತಿಯಮೇಲಿನ ದೃಷ್ಟಿಯಿಂದ ಆದ್ಯಂತವಾಗಿ ಆಲೋಚಿಸಿದರೆ, ಆಗಲೂ ಕೂಡ ನಿಶ್ಚಯದಿಂದ ಆದಾಯವೂ, ಸುಳ್ಳಿನಿಂದ ನಷ್ಟವೂ ಸಂಭವಿಸುವವು. ಆದ್ದರಿಂದ ಹೇಗಾದರೂ ಸರಿ, ಸತ್ಯವನ್ನೇ ಆಡಬೇಕೆಂದು ಶಾಸ್ತ್ರಿಗಳು ಸಿದ್ಧಾಂತಮಾಡಿದ್ದರು.

ರಾಮಶಾಸ್ತ್ರಿಗಳು ಸ್ವತಃ ಸುಳ್ಳನ್ನು ಹೇಳದೇ ಇದ್ದದು ಮಾತ್ರವೇ ಅಲ್ಲ. ಇತರರು ಯಾರು ಸುಳ್ಳನ್ನು ಹೇಳಿದಾಗ್ಯೂ ಸಹಿಸುತಾ ಇರಲಿಲ್ಲ. ಒಂದುದಿವಸ ಒಬ್ಬ ಶಿಷ್ಯನು ಯಾವುದೋ ಒಂದು ಸಂದರ್ಭದಲ್ಲಿ ಒಂದು ಸುಳ್ಳನ್ನು ಹೇಳಿದನೆಂದು ಶಾಸ್ತ್ರಿಗಳಿಗೆ ತಿಳಿಯಿತು. ಆ ಕೂಡಲೆ ಆ ಶಿಷ್ಯನನ್ನು ಕರೆದು—ನೀನು ನಮ್ಮ ಮನೆಗೆ ಬರಬೇಡ, ನಮ್ಮಲ್ಲಿ ಪಾಠಕ್ಕೂ ಬರಬೇಡ, ನೀನು ಆಚೆಗೆ ಹೋಗು ಎಂದು ಅವನನ್ನು ಮನೆಯಿಂದ ಹೊರಕ್ಕೆ ಕಳುಹಿಸಿದ್ದಲ್ಲದೆ ಇತರ ಶಿಷ್ಯರು ಯಾರೂ ಅವನ

ಸಂಗಡ ಮಾತನಾಡಕೂಡದೆಂದು ಗೊತ್ತುಮಾಡಿದರು. ಆ ಕ್ಷಣವೇ ಆ ಶಿಷ್ಯನಿಗೆ ಬಹಳ ದುಃಖಬಂತು. ಆತನು ಎರಡುದಿವಸ ಶಾಸ್ತ್ರಿಗಳ ಮನೆಯ ಬಾಗಿಲಲ್ಲಿ ಉಪವಾಸ ವಾಗಿ ಮಲಗಿದ್ದು ತನ್ನಿಂದ ಅಪರಾಧವಾಯಿತು, ಇನ್ನು ಯಾವ ಅನೃತವನ್ನೂ ತಾನು ಹೇಳುವದಿಲ್ಲವೆಂದು ಎಷ್ಟು ಬೇಡಿಕೊಂಡಾಗ್ಗೂ ಶಾಸ್ತ್ರಿಗಳ ಕೋಪ ಇಳಿಯಲಿಲ್ಲ. ಕೊನೆಗೆ ಶಾಸ್ತ್ರಿಗಳ ಹೆಂಡತಿಯು ಆ ಶಿಷ್ಯನಲ್ಲಿ ದಯವಿಡಬೇಕೆಂದು ಬಹುಬಗೆಯಲ್ಲಿ ಹೇಳಿದಮೇಲೆ ಪ್ರಸನ್ನರಾದರು.



## ೧೫ನೇ ಅಧ್ಯಾಯ

### ಗುಣಾತಿಶಯಗಳು. (೩)



ಇಂಥಾ ಸಚ್ಚರಿತ್ರೆಯುಳ್ಳ ಶಾಸ್ತ್ರಿಗಳ ಮುಖದಲ್ಲಿ ವಿಶೇಷವಾದ ವರ್ಚಸ್ಸು ಇತ್ತು. ಇವರು ಬಹಳ ದೊಡ್ಡವರೆಂಬ ಸಂಗತಿ ಲೋಕಪ್ರಸಿದ್ಧವಾಗಿತ್ತು. ಮೈಸೂರಿಗೆ ಬಂದ ದೊಡ್ಡ ಅಧಿಕಾರಿಗಳೆಲ್ಲಾ ಇವರ ದರ್ಶನವನ್ನು ಮಾಡದೇ ಹೋಗುತಿರಲಿಲ್ಲ. ಒಂದಾನೊಂದು ಸಮಯದಲ್ಲಿ ಬೆಂಗಳೂರ ಕಮಿಷನರ ಕಚೇರಿ ಹೆಡ್ ಸಿರಸ್ತೇದಾರನಾಗಿ ದಿವಾನನೆಂದು ಗೌರವಾರ್ಥವಾಗಿ ಕರೆಯಲ್ಪಡುತಾ

ಇದ್ದ ಕೃಷ್ಣಮನಾಯಕ ಎಂಬಾತನು ಮೈಸೂರಿಗೆ ಬಂದನು ; ಕೃಷ್ಣರಾಜ ಒಡೆಯರವರ ಭೇಟಿಯನ್ನು ಮಾಡಿದತರುವಾಯ ರಾಮಶಾಸ್ತ್ರಿಗಳ ಮನೆಗೆ ಅವರ ದರ್ಶನಾರ್ಥವಾಗಿ ಹೋದನು. ಪ್ರಾತಃಕಾಲ ೮—೮॥ ಗಂಟೆ ಹೊತ್ತಾಗಿತ್ತು. ಶಾಸ್ತ್ರಿಗಳ ಶಿಷ್ಯರು ಈತನನ್ನು ಕಂಡು ಯೋಗ್ಯವಾದ ಸ್ಥಳದಲ್ಲಿ ಕುಳ್ಳಿರಿಸಿ ಒಳಗೆ ತಿಳಿಸಿದರು. ಸ್ನಾನಮಾಡಿ ಮಡಿಯುಟ್ಟು ವಿಭೂತಿರುದ್ರಾಕ್ಷಿಗಳನ್ನು ಧರಿಸಿಕೊಂಡು ಒಳಗೆಇದ್ದ ಶಾಸ್ತ್ರಿಗಳು ಈಚೆಗೆ ಬಂದರು. ಕುಶಲಪ್ರಶ್ನೆಮಾಡಿ ನಾಯಕರನ್ನು ಮರ್ಯಾದೆಯಿಂದ ಕಳುಹಿಸಿದರು. ಶಾಸ್ತ್ರಿಗಳನ್ನು ಕಂಡು ನಾಯಕರಿಗೆ ಬಹಳ ಗೌರವ ಹುಟ್ಟಿತು. ಅವರು ಹಿಂತಿರುಗಿ ಬರುತಾ ತಮ್ಮೊಡನೆ ಬಂದಿದ್ದವರ ಸಂಗಡ ಇಂಥಾ ವರ್ಚಸ್ಸನ್ನು ಎಲ್ಲಿಯೂ ಕಾಣಲಿಲ್ಲ, ಶಾಸ್ತ್ರಿಗಳ ಮುಖವನ್ನು ಕಂಡೊಡನೆಯೇ ಸಾಕ್ಷಾತ್ ಪರಮೇಶ್ವರನನ್ನು ಕಂಡಹಾಗಾಯಿತು, ಎಂದು ಹೇಳಿದರು. ಹೀಗೆ ಅಂತಃ ಇದ್ದ ಬುದ್ಧಿ ಶಕ್ತಿಯೂ ಚಿತ್ತವೃತ್ತಿಯೂ ಮುಖದಲ್ಲಿಯೇ ಪ್ರಕಾಶಿಸುತಾ ಇತ್ತು.

ರಾಮಶಾಸ್ತ್ರಿಗಳು ಯಾವ ಪಕ್ಷಪಾತವನ್ನೂ ಮಾಡುತಾ ಇರಲಿಲ್ಲ. ಪಕ್ಷಪಾತವನ್ನು ಯಾರಾದರೂ ಮಾಡಿದರೆ ಅದನ್ನು ಸಹಿಸುತಾಲೂ ಇರಲಿಲ್ಲ. ಒಂದಾನೊಂದು ಸಮ

ುದಲ್ಲಿ ಅರಮನೆಯಲ್ಲಿ ವೈದಿಕರಿಗೆಲ್ಲಾ ಬಹುಮಾನವನ್ನು ೊಡಿದರು. ರಾಮಶಾಸ್ತ್ರಿಗಳ ಶಿಷ್ಯರನೇಕರಿಗೆ ಶಾಲುಜೋ ುಯನ್ನು ಕೊಡಿಸಿದರು. ಧಾರವಾಡದ ಶ್ರೀನಿವಾಸಾಚಾರ್ಯ ೆಂಬುವರಿಗೆ ಏನೂ ದೊರೆಯದೆ ಬಿಟ್ಟುಹೋಯಿತು. ಆ ಮಯದಲ್ಲಿ ಯಾವ ಗಲಗೂ ಆಗಲಿಲ್ಲ. ಮರುದಿವಸ ಷ್ಯರೆಲ್ಲರೂ ಸೇರಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳು ಾಗ್ಗೆ ಧಾರವಾಡಾಚಾರ್ಯರೊಬ್ಬರಿಗೆ ಮಾತ್ರ ಶಾಲ್ ಜೋ ುಯ ಸಂಭಾವನೆ ಬರಲಿಲ್ಲವೆಂದು ತಿಳಿಯಿತು. ಆಗ ಕೆ ುವು ಶಿಷ್ಯರು—ನಿಮಗೆ ಯಾಕೆ ಶಾಲು ಬರಲಿಲ್ಲವೆಂದು ೇಳಲಾಗಿ, ಧಾರವಾಡದ ಶ್ರೀನಿವಾಸಾಚಾರ್ಯರು—ನಾನೂ ುಭೂತಿ ಇಟ್ಟಿದ್ದರೆ, ನನಗೂ ಶಾಲುಜೋಡಿ ಬರುತಾ ಿತ್ತು ಎಂದರು. ಆ ಮಾರನೇ ದಿವಸ ಶಿಷ್ಯರೆಲ್ಲರೂ ಾಠವನ್ನು ಓದುತಾ ಕೂತಿರುವಾಗ್ಗೆ ಯಾರೋ ಈ ಸಂ ಗತಿಯನ್ನು ರಾಮಶಾಸ್ತ್ರಿಗಳ ಕಿವಿಗೆ ಹಾಕಿದರು. ಇದನ್ನು ಕೇಳಿದ ಕೂಡಲೆ ಶಾಸ್ತ್ರಿಗಳು—ಮೊದಲೇ ಆ ದಿವಸವೇ ಈ ಸಂದರ್ಭ ತಮಗೆ ತಿಳಿಯದೇ ಹೋಯಿತಲ್ಲಾ ಎಂದು ೇಚಾಡುತಾ, ಒಳಕ್ಕೆ ಹೋಗಿ ಒಂದು ಶಾಲುಜೋಡಿಯ ನ್ನು ತಂದು ಆ ಶಿಷ್ಯನಿಗೆ ಹೊದ್ದಿಸಿದರು. ಅದನ್ನು ಸ್ವೀ ಕರಿಸಿದರೆ ಶಾಸ್ತ್ರಿಗಳಿಗೆ ನಷ್ಟವಾಗುತ್ತೆ, ಸ್ವೀಕರಿಸದಿದ್ದರೆ

ಅವರಿಗೆ ಅಸಮಾಧಾನವಾಗುತ್ತೆ, ಹೀಗೆ ಉಭಯಪಕ್ಷದಲ್ಲಿಯೂ ಸಂಕಟಬಂತೆಂದು ಯೋಚಿಸಿ, ಆ ಬಹುಮಾನವನ್ನು ಗುರುಪ್ರಸಾದವೆಂದು ಧಾರವಾಡದ ಆಚಾರ್ಯರು ತೆಗೆದುಕೊಂಡರು.

ರಾಮಶಾಸ್ತ್ರಿಗಳು ಪರಹಿಂಸೆಯನ್ನು ಯಾವಾಗಲೂ ಸಹಿಸುತಾ ಇರಲಿಲ್ಲ. ಯಾವ ಪ್ರಾಣಿಯೇ ಆಗಲಿ ಕಷ್ಟಪಡುವುದನ್ನು ನೋಡಿ ತಾವು ಬಹುವಾಗಿ ಮನಸ್ಸಿನಲ್ಲಿ ಕೊರಗುತಾ ಇದ್ದರು. ಈ ವಿಧವಾದ ಭೂತದಯೆಯು ಈ ಪುಣ್ಯಾತ್ಮರಲ್ಲಿ ವಿಶೇಷವಾಗಿತ್ತು. ಒಂದು ದಿವಸ ಶಾಸ್ತ್ರಿಗಳು ಮನೆಗೆ ಬರುವಾಗ್ಗೆ ಮಧ್ಯಾಹ್ನ ೧೨ ಗಂಟೆಯಾಗಿತ್ತು. ಅದೂ ಬೇಸಿಗೇ ಕಾಲ. ಬಿಸಿಲು ಬಹಳ ವೇಗವಾಗಿತ್ತು. ಸ್ವಲ್ಪ ದೂರದಿಂದ ನೀರನ್ನು ತರಬೇಕಾಗಿತ್ತು. ದೇಹದಲ್ಲಿ ವಿಶೇಷ ಬಲವಿಲ್ಲದೆ ಕೊಡದಲ್ಲಿ ಹೊರಲಾರದೆ ನೀರನ್ನು ಹೊತ್ತು ತರುತಾ ಇದ್ದ ಶಿಷ್ಯರಾದ ಧಾರವಾಡದ ಶ್ರೀನಿವಾಸಾಚಾರ್ಯರನ್ನು ಶಾಸ್ತ್ರಿಗಳು ದಾರಿಯಲ್ಲಿಯೇ ಕಂಡು ಪೇಚಾಡುತಾ ಆ ಕೊಡವನ್ನು ಒಂದುಕಡೆ ತಾವೂ ಹಿಡಿದುಕೊಂಡು ನೀರನ್ನು ಹೊತ್ತುತಂದರು.

ತಮ್ಮ ಸಮಕಾಲಿಕರಾದ ಇತರ ಪಂಡಿತರುಗಳಲ್ಲಿ ರಾಮಶಾಸ್ತ್ರಿಗಳು ಹೆಚ್ಚಾಗಿ ಗೌರವವನ್ನು ಇಟ್ಟುಕೊಂಡು

.ದ್ದರು. ಮೈಸೂರಲ್ಲಿ ಕಾಶೀ ತಿಮ್ಮಣ್ಣಾಚಾರ್ಯರೆಂದು
.ಬ್ಬ ದೊಡ್ಡ ತಾರ್ಕಿಕರು ಇದ್ದರು. ಗಧಾಧರಭಟ್ಟಾ
ಕಾರ್ಯರು ತಮ್ಮ ಹೆಸರನ್ನೇ ಇಟ್ಟು ಗದಾಧರೀಯ ಎಂ
) ದೊಡ್ಡ ಉದ್ಗ್ರಂಥವನ್ನು ಬರೆದಿದಾರೆ. ಇದಕ್ಕೆ ಕೃ
ಣ್ಣಭಟ್ಟಾಚಾರ್ಯರು ವ್ಯಾಖ್ಯಾನವನ್ನು ಬರೆದಿದಾರೆ. ಈ
ಕೃಷ್ಣಭಟ್ಟಾಚಾರ್ಯರಿಗೆ ರಮಣಾಚಾರ್ಯರು ವಿಠಲೋ
ಪಾಧ್ಯಾಯರು ಎಂದು ಮಹಾ ಪಂಡಿತರಾದ ಇಬ್ಬರು
ಷ್ಯರು ಇದ್ದರು. ವಿಠಲೋಪಾಧ್ಯಾಯರಲ್ಲಿ ರಾಮಶಾಸ್ತ್ರಿಗಳ
ುರುಗಳಾದ ತಿರುಪತಿ ಶ್ರೀನಿವಾಸಾಚಾರ್ಯರು ಶಿಷ್ಯರಾ
.ದ್ದರು. ಈ ಸಂಗತಿ ಹಿಂದೆ ಕಾಣಿಸಿದೆ. ರಮಣಾಚಾ
ರ್ಯರ ತಮ್ಮಂದಿರೇ ಕಾಶೀ ತಿಮ್ಮಣ್ಣಾಚಾರ್ಯರು. ಹೀ
? ಗುರುಶಿಷ್ಯಪರಂಪರೆಯಲ್ಲಿ ಈ ಸಂಬಂಧವಿದ್ದ ಕಾರಣ
.ಮ್ಮಣ್ಣಾಚಾರ್ಯರಲ್ಲಿ ರಾಮಶಾಸ್ತ್ರಿಗಳಿಗೆ ಹೆಚ್ಚಾದ ಭಕ್ತಿ
ಯೂ ವಿಶ್ವಾಸವೂ ಇತ್ತು. ಒಂದು ದಿವಸ ಬೆಳಗ್ಗೆ
.ಮ್ಮಣ್ಣಾಚಾರ್ಯರು ದೈವಾಧೀನರಾದರೆಂದು ವರ್ತಮಾನ
.ಳಿದಕೂಡಲೆ, ಪಾಠವನ್ನು ಹೇಳುತಾ ಕೂತಿದ್ದ ಶಾಸ್ತ್ರಿಗಳು
 ದಿವಸ ಇನ್ನು ಯಾರಿಗೂ ಪಾಠವನ್ನು ಹೇಳುವುದಿಲ್ಲ
ರೆಂಬದಾಗಿ ಶಿಷ್ಯರನ್ನೆಲ್ಲಾ ಕಳುಹಿಸಿ ಶವವನ್ನು ಎತ್ತುವು
ದಕ್ಕೆ ಮುಂಚೆ ತಿಮ್ಮಣ್ಣಾಚಾರ್ಯರ ಮನೆಗೆ ಹೋಗಿ ಅ

ವರ ಮಕ್ಕಳನ್ನು ಕರೆದು ಅವರಿಗೆ ಧೈರ್ಯವನ್ನು ಹೇಳಿ ಸ್ಮಶಾನಕ್ಕೂ ಹೋಗಿ ಬಂದರು.

ಕೈಬಿಟ್ಟು ಹೋಗಿದ್ದ ಇನ್ನೊಂದು ಸಂಗತಿ ಏನೆಂದರೆ: ಶಾಸ್ತ್ರಿಗಳಿಗೆ ಸಿಹಿಯಾದ ಪದಾರ್ಥದಲ್ಲಿ ಇಷ್ಟ ಹೆಚ್ಚಾಗಿತ್ತು. ಕಾರದಲ್ಲಿ ಅಭಿರುಚಿ ಕಡಮೆ. ಶಿಷ್ಯರೆಲ್ಲರನ್ನೂ ಕೂರಿಸಿಕೊಂಡೇ ಭೋಜನಮಾಡುತಾ ಇದ್ದರು. ಎಷ್ಟುಹೊತ್ತಾದರೂ ಅವರನ್ನು ಬಿಟ್ಟು ಕೂತುಕೊಳ್ಳುತಿರಲಿಲ್ಲ. ಊಟಕ್ಕೆ ಕೂತಾಗ ಶಿಷ್ಯರೊಡನೆ ಹಾಸ್ಯಮಾಡುತಾ ಇದ್ದರು. ಹಾಸ್ಯರಸಯುಕ್ತವಾದ ಪ್ರಸ್ತಾಪಗಳನ್ನೂ ಕಥೆಗಳನ್ನೂ ಹೇಳುತಾ ಎಲ್ಲರನ್ನೂ ನಗಿಸುತಾ ಇದ್ದರು. ಇದರಲ್ಲಿ ಊಟ ಎಷ್ಟುಹೊತ್ತಾದರೂ ಕಾಣುತಿರಲಿಲ್ಲ. ರಾತ್ರೆ ಶಾಸ್ತ್ರಿಗಳು ೧೦—೧೧ ಗಂಟೆಯಮೇಲೆ ಮಲಗಿಕೊಳ್ಳುತಿದ್ದರು. ಸುಮಾರು ಒಂದು ಜಾವಹೊತ್ತಾದರೂ ನಿದ್ರೆಮಾಡುತಾ ಇದ್ದರೋ ಹೇಗೋ ಗೊತ್ತಿಲ್ಲ. ಇವರ ಸಮೀಪದಲ್ಲಿಯೇ ಯಾವಾಗಲೂ ಇರುತಿದ್ದ ಶಿಷ್ಯರು ಹೇಳುವುದರಲ್ಲಿ, ರಾತ್ರೆ ಎಷ್ಟುಹೊತ್ತಿನಲ್ಲಿ ಎದ್ದು ನೋಡಿದರೂ ಶಾಸ್ತ್ರಿಗಳು ಹಾಸಿಗೆಯಮೇಲೆ ಕೂತು ಇರುತಿದ್ದರು; ಶ್ವಾಸವನ್ನು ಧಾರಣೆಮಾಡಿ ಸಮಾಧಿಯಲ್ಲಿರುತಿದ್ದರು ಎಂದು ತಿಳಿಯಬರುತ್ತೆ. ಶಾಸ್ತ್ರಿಗಳಲ್ಲಿ ಶಿಷ್ಯರೆಲ್ಲರಿಗೂ ಗೌರವವು

ಪ್ರೀತಿಯೂ ಸಹಾ ಹೆಚ್ಚಾಗಿತ್ತು. ಶಾಸ್ತ್ರಿಗಳ ಪ್ರಸ್ತಾಪವನ್ನು ಯಾವ ಶಿಷ್ಯರಲ್ಲಿ ಮಾಡಿದರೂ ಅವರೆಲ್ಲರೂ ಹೆಚ್ಚಾಗಿ ಆನಂದಪಡುತಾ ಅವರ ಚರಿತ್ರೆಯ ಸಂಗತಿಗಳನ್ನು ಹೇಳುತಾ ಹೇಳುತಾ—ಇನ್ನು ಅಂಥಾ ವಸ್ತು ಹುಟ್ಟುವುದಿಲ್ಲ, ಎಂದು ಕಂಣಿನಲ್ಲಿ ನೀರ ಹಾಕಿದ್ದನ್ನು ಕಂಣಾರ ನೋಡಿದೇನೆ.

ಈ ಮಹಾಪಂಡಿತರ ಚರಿತ್ರೆಯೆಲ್ಲಾ ಪಾಂಡಿತ್ಯವಿಚಾರವೇ ಆಗಿದೆ. ಇದರ ಕೊನೆಮೊದಲನ್ನು ಕಂಡು ಹಿಡಿಯಲು ಸಾಧ್ಯವಾಗಿಲ್ಲ. ಮತ್ತೊಂದು ಸಮಯದಲ್ಲಿ ತರ್ಕಬ್ರಹ್ಮನೆಂಬ ಬಿರುದುಳ್ಳ ನವದ್ವೀಪದ ಪಂಡಿತನೊಬ್ಬನು ಉತ್ತರದೇಶದಿಂದ ಮೈಸೂರ ಸಂಸ್ಥಾನಕ್ಕೆ ಬಂದನು. ತರ್ಕಬ್ರಹ್ಮನು ದೊರೆಯ ಭೇಟಿಯನ್ನು ಮಾಡಿ ಅರಮನೆಯಲ್ಲಿದ್ದ ಸರಸ್ವತೀ ಭಂಡಾರವನ್ನು ನೋಡಲು ಹೋದನು. ಅಲ್ಲಿ ನ್ಯಾಯಶಾಸ್ತ್ರದಮೇಲಿದ್ದ ಗ್ರಂಥಗಳೆಲ್ಲವನ್ನೂ ತೆಗೆದು ನೋಡುವಲ್ಲಿ ಅದು ಕೇವಲ ಅಲ್ಪವಾಗಿತ್ತು. ಆಗ ಆ ವಿದ್ವಾಂಸನು—ಸರಸ್ವತೀ ಭಂಡಾರವೆಂಬ ದೊಡ್ಡ ಹೆಸರುಳ್ಳ ಅರಮನೇ ಪುಸ್ತಕಶಾಲೆಯಲ್ಲಿಯೇ ಸರಿಯಾದ ಉದ್ಗ್ರಂಥಗಳು ಇಲ್ಲದಿರುವಾಗ, ನ್ಯಾಯಶಾಸ್ತ್ರಕ್ಕೆ ಹೆಸರಗೊಂಡಿರುವ ರಾಮಶಾಸ್ತ್ರಿಗಳು ಏನುತಾನೆ ಓದಿದಾರಾದೀತು !

ಎಂದು ಅಲಕ್ಷ್ಯವಾಗಿ ಮಾತನಾಡಿದನು ; ಶಾಸ್ತ್ರಿಗಳ ಮನೆಗೆ ಹೋಗಿ ಅವರನ್ನು ಕಂಡು ಆತನು ಅವರ ಪುಸ್ತಕಶಾಲೆಯನ್ನು ನೋಡಲು ಹೆಚ್ಚಾದ ಗ್ರಂಥಗಳು ಅವರಲ್ಲಿಯೂ ದೊರೆಯಲಿಲ್ಲ. ಆ ದೇಶಾಂತರದ ಪಂಡಿತನ ವಿದ್ಯಾಗರ್ವವು ಮತ್ತೂ ಹೆಚ್ಚಿತು. ತರ್ಕಬ್ರಹ್ಮನಿಗೂ ರಾಮಶಾಸ್ತ್ರಿಗಳಿಗೂ ವಾಕ್ಯಾರ್ಥ ಮೊದಲಾಗಿ ಕೆಲವುದಿವಸ ನಡೆಯಿತು. ದಕ್ಷಿಣದೇಶದಲ್ಲಿಲ್ಲದೆ ಉತ್ತರದೇಶದಲ್ಲಿಯೇ ಇರುವ ಅನೇಕ ಗ್ರಂಥಗಳಮೇಲೆ ಆತನು ವಾದಮಾಡುತಾಬಂದಹಾಗೆಲ್ಲಾ ರಾಮಶಾಸ್ತ್ರಿಗಳು ಅದಕ್ಕೆ ಉತ್ತರವನ್ನು ಕೊಟ್ಟು ಆ ಪಂಡಿತನ ಸಿದ್ಧಾಂತವನ್ನು ಖಂಡಿಸಿದರು. ಆಗ ಈ ಶಾಸ್ತ್ರಿಗಳು ಓದದೇ ಇದ್ದ ಗ್ರಂಥಗಳಮೇಲೆ ಪ್ರಶ್ನೆ ಮಾಡಿದಾಗ್ಯೂ, ಸಮಂಜಸವಾದ ಉತ್ತರವನ್ನು ಕೊಟ್ಟು ಖಂಡನೆಮಾಡಿದ ಪಾಂಡಿತ್ಯವು ಉಪಾಸನಾಬಲವೆಂತಲೂ ಪ್ರತಿಭೆ ಎಂತಲೂ ಎಣಿಸಬೇಕಲ್ಲದೆ, ಬರೀ ಪುಸ್ತಕವಾದವಲ್ಲವೆಂದು ಕೃಷ್ಣರಾಜ ಒಡೆಯರವರ ಎದುರಿಗೆ ರಾಮಶಾಸ್ತ್ರಿಗಳನ್ನು ಆ ಉತ್ತರದೇಶದ ಪಂಡಿತನು ಹೊಗಳಿದನು.

ಶಾಸ್ತ್ರಿಗಳಿಗೆ ದೈವಭಕ್ತಿ ವಿಶೇಷವಾಗಿತ್ತು. ಆಗಾಗ್ಗೆ ನಡೆದುಕೊಂಡು ಸಂಸಾರಸಮೇತವಾಗಿ ನಂಜನಗೂಡಿಗೆ

ಹೋಗುತಾಇದ್ದರು. ಸಾಮಾನುಗಳನ್ನು ಕೆಲವು ಶಿಷ್ಯರೂ, ಮಕ್ಕಳನ್ನು ಕೆಲವು ಶಿಷ್ಯರೂ, ಔಪಾಸನಾಗ್ನಿಯನ್ನು ಒಬ್ಬ ಶಿಷ್ಯನೂ ಹೀಗೆ ಹೊತ್ತುಕೊಂಡು ಹೋಗುತಾಇದ್ದರು. ದಾರಿಯಲ್ಲಿ ಮಲ್ಲನಮೂಲೆಯಬಳಿ ಕಪಿಲಾನದಿಯು ಹೆಚ್ಚಾಗಿ ಹರಿಯುತಿದ್ದರೆ ಸೇತುವೇಮೇಲಿನಿಂದ ನದಿಗೆ ಧುಮ್ಮಿಕ್ಕಿ ಶಾಸ್ತ್ರಿಗಳು ಈಜಿಕೊಂಡು ಆಚೇತಡಿಗೆ ಹೋಗುತಾ ಇದ್ದರು.

ನಂಜನಗೂಡಲ್ಲಿ ದೇವಸ್ಥಾನಕ್ಕೆ ಹೋಗಿ ದೇವರ ಮುಂದೆ ನಿಂತು ವಿಶೇಷವಾದ ಭಕ್ತಿಯಿಂದ ಸ್ತೋತ್ರಕ್ಕೆ ಆರಂಭಮಾಡುತಾ ಇದ್ದರು. ಆಗ ಶಾಸ್ತ್ರಿಗಳ ಕಣ್ಣಿನಿಂದ ಆನಂದಬಾಷ್ಪವು ಸುರಿಯುತಾ ಇತ್ತು. ಶ್ರದ್ಧೆಯೂ ಕರುಣೆಯೂ ಮಿಳಿತವಾಗಿರುವ ಚೇತನಗಳಿಗೆ ದೈವಸನ್ನಿಧಿಯಲ್ಲಿ ಹೀಗೆ ಬಾಷ್ಪಧಾರೆಗಳು ಬರುವುದು ಸಹಜವಾಗಿದೆ. ಜನ್ಮಶೇಷಗಳೆಲ್ಲಾ ಸವೆದು ಕೊನೇಜನ್ಮವನ್ನು ಎತ್ತಿರುವ ಪುಣ್ಯಾತ್ಮರಿಗೆ ಕೆಲವು ರಸಗಳು ಅಧಿಕವಾಗಿ ತೋರಿದಕಾಲದಲ್ಲಿ ಹೀಗಾಗುವುದೆಂದು ಒಬ್ಬಾನೊಬ್ಬ ಪರಮಹಂಸನು ಹೇಳಿದಾನೆ. ಇಂಥಾ ಪುಣ್ಯಾತ್ಮರು ಲೋಕದಲ್ಲಿ ಹುಟ್ಟುವುದು ಮಾತ್ರ ಬಹಳ ಕಡಮೆಯಾಗಿದೆ. ಶಾಸ್ತ್ರಿಗಳು ನರಸಿಂಹ ಉಪಾಸಕರೆಂದು ಕೆಲವರು ಎಂದುಕೊಳ್ಳುತಾರೆ.

ರಾಮಶಾಸ್ತ್ರಿಗಳಲ್ಲಿ ಕರ್ಮಶ್ರದ್ಧೆಯು ವಿಶೇಷವಾಗಿತ್ತು.
ಸಸ್ತ ಕ್ರತುಗಳನ್ನೂ ಮಾಡಬೇಕೆಂಬ ಕೋರಿಕೆ ಇವ
ಇತ್ತೆಂದು ಹಿಂದೆ ಕಾಣಿಸಿದೆ. ಇದನ್ನು ನೆರವೇರಿ
ು ತಕ್ಕ ಪ್ರಯತ್ನವನ್ನು ನಡಿಸುತಿದ್ದರು. ಕ್ರತುಗಳ
ಮಾಡುವುದಕ್ಕೆ ಮುಂಚೆ ಶ್ರೌತಾಗ್ನಿ ಸಿದ್ಧಿಯಾಗುವುದ
ಕ್ಕೋಸ್ಕರ ಆಧಾನವೆಂಬ ಒಂದು ಕರ್ಮವನ್ನು ಮಾಡ
ಶಾಸ್ತ್ರವಿದೆ. ಇದನ್ನು ಮಾಡಬೇಕೆಂದು ಶಾಸ್ತ್ರಿಗಳು
ತ್ನಿಸಿದರು. ಇದಕ್ಕೆ ನಾಲ್ಕುಜನ ಋತ್ವಿಕ್ಕುಗಳಾಗಬೇ
. ಇವರಲ್ಲಿ ಒಬ್ಬರಿಗೆ ಕುದುರೆಯನ್ನೂ ಇನ್ನೊಬ್ಬರಿಗೆ
ವನ್ನೂ ಹೀಗೆ ದಕ್ಷಿಣೆಯಾಗಿ ಕೊಡಬೇಕೆಂದು ಉಕ್ತ
ಗಿದೆ. ಅದರಂತೆ ಅಂಥಾ ದಕ್ಷಿಣೆಯನ್ನೇ ಕೊಡಲು
ಮಾಡಿಕೊಂಡರು. ಇದಕ್ಕೆ ಅರಣಿಯನ್ನು ಮಾಡಿಕೊ
ಬೇಕಾಯಿತು. ಅರಳೀಗಿಡದಲ್ಲಿ ಬನ್ನೀಗಿಡ ಮಿಳಿತವಾಗಿ
ಟ್ಟಿದ್ದರೆ ಅಂಥಾ ಅರಳೀಮರದಲ್ಲಿ ಒಂದಾನೊಂದು ಕ್ಲ
ನಾದ ದಿಕ್ಕಿಗೆ ಹೋಗಿರುವ ಕೊಂಬೆಯನ್ನು ಕ್ಲಪ್ತ
ದ ದಿವಸ ಕರ್ತೃವು ಸ್ನಾನಮಾಡಿ ಆಹ್ನಿಕಮಾಡಿಕೊಂ
ಇದಕ್ಕಾಗಿ ವಿಧಾಯಕವಾಗಿರುವ ಮಂತ್ರವನ್ನು ಹೇ
ತಾ ಕಡಿಯಬೇಕು. ಹಾಗೆ ಕಡಿದ ಕೊಂಬೆಯು ಒಂದು
ಪ್ತವಾದ ದಿಕ್ಕಿಗೆ ಬೀಳಬೇಕು. ಆ ಕೊಂಬೆಯನ್ನು ತಂದು

ಅದರಲ್ಲಿ ಅರಣಿಯನ್ನು ಮಾಡಬೇಕು. ಅರಣಿಯು ಒಂದು ಮರದ ಮರಗಿಯಹಾಗೆ ಇರುತ್ತೆ. ಅದರಲ್ಲಿ ಬೆರಣೀ ಹುಡಿಯನ್ನು ಹಾಕಿ, ಬೇರೊಂದುಮರದ ತುಂಡನ್ನು ಅದರಮೇಲೆ ಇರಿಸಿ ಬೈರಿಗೆ ಕಡೆದಹಾಗೆ ಕಡೆದರೆ ಅದರಲ್ಲಿ ಅಗ್ನಿಬಿದ್ದು ಬೆರಣೀಹುಡಿ ಹತ್ತಿಕೊಳ್ಳುವುದು. ಆ ಅಗ್ನಿಯಿಂದ ಯಜ್ಞವನ್ನು ಮಾಡಬೇಕು. ಇದಕ್ಕಾಗಿ ಅಂಥಾ ಅರಳೀಮರವನ್ನು ಹುಡುಕಿಸಿದರು. ಹೊಳೇನರಸೀಪುರದ ತಾಲ್ಲೋಕಿನ ಒಂದು ಗ್ರಾಮದಲ್ಲಿ ಅಂಥಾ ಮರ ಸಿಕ್ಕಿತು. ವಿಧಿಪ್ರಕಾರ ಆ ಕೊಂಬೆಯನ್ನು ತಾವೇ ಕಡಿದರು. ಅದು ಶ್ರೌತದಲ್ಲಿ ಹೇಳಿರುವ ದಿಕ್ಕಿಗೆ ಬಿತ್ತು. ಅದನ್ನು ಕಂಡು ಶಾಸ್ತ್ರಿಗಳಿಗೆ ಬಹಳ ಸಂತೋಷವಾಯಿತು. ಆ ಕೊಂಬೆಯಲ್ಲಿ ಎರಡು ಅರಣಿಯನ್ನು ಮಾಡಿಸಿದರು; ಇನ್ನೂ ಇತರ ಯಜ್ಞ ಸಾಮಗ್ರಿಗಳನ್ನು ಇತರ ಮರಗಳಲ್ಲಿ ಮಾಡಿಸಿದರು. ಲಗ್ನವನ್ನು ನಿಶ್ಚೈಸಿದರು. ಎಲ್ಲಾ ಸಿದ್ಧವಾಯಿತು. ಆಗ ಶಾಸ್ತ್ರಿಗಳು ಬೆಳಗ್ಗೆ ಕೆರೆಗೆಹೋಗಿ ಸ್ನಾನವನ್ನು ಮಾಡಿಕೊಂಡು ಮನೆಯ ಬಾಗಿಲಸಮೀಪಕ್ಕೆ ಬರುವಾಗ್ಗೆ ಇವರ ಕುಟುಂಬ ಬಹಿಷ್ಟರಾದರೆಂದು ತಿಳಿಯಿತು. ಮೊದಲೇ ಈ ಪ್ರತಿಕೂಲಗಳೆಲ್ಲವನ್ನೂ ಯೋಚಿಸಿ ಅದಕ್ಕೆ ಸರಿಯಾಗಿ ಲಗ್ನವನ್ನು ಗೊತ್ತುಮಾಡಿಸಿದ್ದಾಗ್ಯೂ ಅಕಾಲದಲ್ಲಿ ಅವರು ಹೊರಗಾದ್ದ

ರಿಂದ ಶಾಸ್ತ್ರಿಗಳಿಗೆ ಬಹಳ ಖೇದ ಉಂಟಾಯಿತು. ಮು ನೇಬಾಗಿಲ ಸಮೀಪಕ್ಕೆ ಬಂದವರು ಈ ಸಂಗತಿಯು ನ್ನು ಕೇಳಿ ಅಲ್ಲಿಯೇ ಸ್ವಲ್ಪಹೊತ್ತು ನಿಂತುಕೊಂಡರು. ಆಗ—ಅಯ್ಯೋ, ನಾನುಮಾಡಿದ ಪ್ರಯತ್ನದಲ್ಲಿ ಆ ಯಜ್ಞೇ ಶ್ವರನೇ ಬಂದು ಹವಿರ್ಭಾಗವನ್ನು ತೆಗೆದುಕೊಳ್ಳಬೇಕು; ಅಷ್ಟು ನಿಷ್ಕರ್ಷೆಯಾಗಿ ಕರ್ಮವನ್ನು ಮಾಡುತಿದ್ದೆ. ಅ ಕಾಲದಲ್ಲಿ ಇಂಥಾ ಅಭ್ಯಂತರ ಉಂಟಾದಕಾರಣ, ಈ ಕರ್ಮವನ್ನು ನಾನು ಮಾಡಕೂಡದೆಂದು ದೈವಚಿತ್ತದಲ್ಲಿರು ವಹಾಗೆ ತೋರುತ್ತೆ. ಅದಕ್ಕೆ ವಿರೋಧವಾಗಿ ನಡೆಯಲು ಸಾಧ್ಯವಿಲ್ಲ ಎಂದು ಶಾಸ್ತ್ರಿಗಳು ಬಹುವಾಗಿ ಸಂಕಟಪಡುತಾ, ಮನೆಯೊಳಕ್ಕೆ ಹೋಗದೆ ಅದೇಮುಖಕ್ಕೆ ಊಟಸಹಿತ ಇಲ್ಲದೆ ಪಶ್ಚಿಮವಾಹಿನಿಗೆ ಹೊರಟುಹೋದರು. ಶಿಷ್ಯರೂ ಮಿತ್ರರೂ ಹೀಗೆ ಉಂಟಾದ ಚಿತ್ತದ ದುಗುಡವನ್ನು ಬಿಡ ಬೇಕೆಂದು ಹೇಳಿದಮೇಲೆ ಮೂರು ದಿವಸದ ತರುವಾಯ ಊರಿಗೆ ಬಂದರು.

ಯಜ್ಞನಾರಾಯಣನೆಂಬ ಮಗನು ಹುಟ್ಟಿದನಂತರ ಶ್ರೀಲಕ್ಷ್ಮಿಯೂ ಸೇರಿ ಮೂರು ಸ್ತ್ರೀಜನನವಾದಂತೆಯೂ, ಅವರಲ್ಲಿ ಶ್ರೀಲಕ್ಷ್ಮಿಹೊರತು ಉಳಿದವರೆಲ್ಲಾ ಹೊಲೇ ಮ ನೆಯಲ್ಲಿಯೇ ಸತ್ತುಹೋದಂತೆಯೂ ತಿಳಿಯಬರುತ್ತೆ. ಪುಂ

ಜನನವಾಗಲೆಂದು ಶಾಸ್ತ್ರಿಗಳು ಪುಂಸವನವೆಂದರೆ ಸೀಮಂತ ಕರ್ಮವನ್ನು ಮಾಡಿದರು. ಸೀಮಂತವು ಷೋಡಶ ಕರ್ಮಗಳಲ್ಲಿ ಒಂದು ಕರ್ಮವಾಗಿದೆ. ಇದನ್ನು ಮಾಡಿದರೆ ಪುತ್ರನೇ ಹುಟ್ಟುತಾನೆಂಬ ನಂಬಿಕೆಯು ಇವರಿಗೆ ಖಂಡಿತವಾಗಿಯೂ ಇತ್ತು. ಈ ಮಾತನ್ನೇ ಶಿಷ್ಯನಾದ ಸುಬ್ರಹ್ಮಣ್ಯಶಾಸ್ತ್ರಿಯಸಂಗಡ ಹೇಳಿದರು. ಅವರಿಗೆ ಕರ್ಮದಲ್ಲಿ ಯಾವ ನಂಬಿಕೆ ಇತ್ತೋ ಅದಕ್ಕೆ ಅನುಸಾರವಾಗಿ ಪುತ್ರ ಹುಟ್ಟಿದನು. ಅದರಲ್ಲಿಯೂ ಸಾಧಾರಣ ಪುತ್ರನಲ್ಲ. ಚಕ್ರವರ್ತಿಗಳಿಂದಲೂ ಕೂಡ ನಮಸ್ಕಾರಮಾಡಲ್ಪಡತಕ್ಕ ಪದವಿಯುಳ್ಳ ಚಕ್ರಾಧೀಶ್ವರನನ್ನು ಪಡೆದರು. ಎಂಥಾ ಚಕ್ರಾಧಿಪತಿಗಳಾದರೂ ಅವರಿಗೆ ಸಾಮಂತರಾಜರುಂಟು. ಇವರಿಗೆ ನಮಸ್ಕಾರಮಾಡದೆ ಇರತಕ್ಕ ಶತ್ರುಗಳುಂಟು. ಆ ಪುತ್ರನ ಚಕ್ರಾಧಿಪತ್ಯಕ್ಕೆ ಎಲ್ಲರೂ ಮಿತ್ರರೇ ಹೊರತು ಶತ್ರುಗಳಿಲ್ಲ. ಚಕ್ರವರ್ತಿಗಳಿಗೆ ಐಹಿಕಪದವಿಯುಂಟೆಂದು ಒಪ್ಪಿದಾಗ್ಯೂ ಪರದಲ್ಲಿಯೂ ಇಂಥಾ ಸ್ಥಿತಿಯೇ ಇರುವುದೆಂಬ ನಂಬಿಕೆ ಇಲ್ಲ. ಇವರ ಪುತ್ರರಾದರೊ ಇಹಪರಗಳೆರಡರಲ್ಲಿಯೂ ಏಕರೀತಿಯಾಗಿ ಶತ್ರುರಹಿತವಾದ ಮುಕ್ತಿ ಸಾಮ್ರಾಜ್ಯಕ್ಕೆ ಅಧಿಪತಿಗಳಾಗಿದಾರೆ.

---

ಸಂಪೂರ್ಣ.

# ಇದೇ ಗ್ರಂಥಕರ್ತ ರಚಿಸಿರುವ ಇತರ ಪುಸ್ತಕಗಳು

---

೧ ಹೇಮಚಂದ್ರರಾಜವಿಲಾಸ — ಷೇಕ್ಸ್‌ಪಿಯರ್ ಎಂಬ ಇಂಗ್ಲಿಷ್ ಕವಿಯ ಕಿಂಗ್‌ಲೀರ್ ಎನ್ನುವ ನಾಟಕದ ಭಾಷಾಂತರ — ನಾಟಕರೂಪವಾಗಿ — ಮೈಸೂರು ಅಪ್ಪರ್ ಸೆಕೆಂಡರಿ ಪರೀಕ್ಷೆಗೆ ೧೯೦೫ ರಲ್ಲಿ ಓದಲು ನೇಮಕವಾಗಿತ್ತು.

೨ ಚೀನಾರಾಜ್ಯದ ಮತೋದ್ಧಾರಕ ಕಾಂಪ್ಯೂಷ್ ಎಂಬಾತನ ಚರಿತ್ರೆ–೧೯೮೮ ನೇ ಇಸವಿ ಮದರಾಸು ಎಫ್. ಎ. ಪರೀಕ್ಷೆಗೆ ಓದಲು ನೇಮಕವಾಗಿತ್ತು.

೩ ಸುಮತಿ ಮದನಕುಮಾರ ಚರಿತ್ರೆ—೧೮೯೬ ನೇ ಇಸವಿ ಮೈಸೂರು ಲೋವರ್ ಸೆಕೆಂಡರಿ ಪರೀಕ್ಷೆಗೆ ಓದಲು ನೇಮಕವಾಗಿತ್ತು. ಬಾಲಕರಿಗೂ, ಅವರ ತಂದೆತಾಯಿಗಳಿಗೂ ಏಕರೀತಿಯಾಗಿ ಉಪಯುಕ್ತವಾದ್ದು.

೪ ಮೈಸೂರು ಸರ್ಕಾರದ ಸ್ಕೂಲುಗಳಲ್ಲಿ ಒಂದನೇ ತರಗತಿಗಳಲ್ಲಿ ಓದಿಸುತ್ತಿರುವ ೧ನೇ ರೀಡರ್.

೫ ಪ್ರಜಾಪ್ರತಿನಿಧಿ ಪ್ರಭುತ್ವ, ಗುರುಶಿಷ್ಯರ ಸಂಬಂಧ, ಮೊದಲಾದ ಹಲವು ಚಿಲ್ಲರೆ ಪ್ರಬಂಧಗಳು.

೬ ಕನ್ನಡ ಭೂಪಟಗಳ ವಹಿ (ಜಂಟಿ).

೭ ಷೇಕ್ಸ್‌ಪಿಯರ್ ಕವಿಯ ಸಿಂಬಿಲೈನ್ ನಾಟಕದ ಕಥಾರೂಪವಾದ ಭಾಷಾಂತರ–ಮದರಾಸಿನ ೧೮೮೪ನೇ ಇಸವಿ ಎಫ್. ಎ. ಪರೀಕ್ಷೆಗೂ, ೧೮೯೭ನೇ ಇಸವಿ ಮೆಟ್ರಿಕ್ಯುಲೇಷನ್ ಪರೀಕ್ಷೆಗೂ, ಓದಲು ನೇಮಕವಾಗಿತ್ತು (ಜಂಟಿ).

೮ ಚರಿತ್ರದರ್ಪಣ (ಹಿಂದೂದೇಶದ ಚರಿತ್ರೆ), ೨ ಸಂಪುಟ. ಮೈಸೂರು ಸರ್ಕಾರಿ ಸ್ಕೂಲುಗಳಲ್ಲಿಯೂ, ಮದರಾಸಿನ ಕೆಲವು ಸ್ಕೂಲುಗಳಲ್ಲಿಯೂ, ಓದಿಸುತ್ತಿದ್ದರು. ಮೈಸೂರು ಸರ್ಕಾರಿ ಪ್ರೆಸ್‌ನಲ್ಲಿ ಅಚ್ಚಾದ್ದು. (ಜಂಟಿ).

೯ ಚರಿತ್ರಸಂಗ್ರಹ (ಹಿಂದೂದೇಶದ ಚರಿತ್ರೆ, ಚಿಕ್ಕದು.) ಮೈಸೂರು ಮತ್ತು ಮದರಾಸು ಕನ್ನಡ ಸ್ಕೂಲುಗಳಲ್ಲಿ ಓದಿಸುತ್ತಿದ್ದರು. (ಜಂಟಿ).

೧೦ ನೀತಿಚಿಂತಾಮಣಿ— ಪುರಾಣೇತಿಹಾಸದ ಕಥೆಗಳಿಂದ ಕ್ರಮವಾಗಿ ನೀತಿಯನ್ನು ಬೋಧಿಸತಕ್ಕದ್ದು. ಮೈಸೂರು, ಮದರಾಸು ಮತ್ತು ಬೊಂಬಾಯಿ ಸೀಮೆಗಳಲ್ಲಿ ಪ್ರಚಾರಗೊಂಡದ್ದು—ಬಾಲಕರಿಗೆ ವಿಶೇಷ ಉಪಯುಕ್ತವಾದ್ದು. ಮೈಸೂರು ಸರ್ಕಾರಿ ಪ್ರೆಸ್‌ನಲ್ಲಿ ಎರಡುಸಾರಿ ಅಚ್ಚಾದ್ದು. (ಜಂಟಿ.)



# 1922 ನೆ ವರ್ಷದ ಮೈ. ದೇ. ಅಪ್ಪರ್ ಸೆಕಂಡರಿ ಪರೀಕ್ಷೆಯ ಕನ್ನಡ ಪುಸ್ತಕಗಳು.

| | | | | |
|---|---|---|---|---|
| ಜೀವಸಂಬೋಧನೆ | (1st Language) | 0 | 13 | 0 |
| ಭಾವಚಿಂತಾರತ್ನ | ,, | 0 | 15 | 0 |
| ಚಿಲ್ಕ [illegible]ಯಾಣ ಶತಕ | | 0 | 5 | 0 |
| ಚಿಕ್ಕದೇವರಾಜ ವಂಶಾವಳಿ | ,, | 1 | 5 | 0 |
| ರಘುವಂಶ ಚರಿತಂ II ಭಾಗ | | 0 | 12 | 0 |
| ಕನಕಲತಾ ಪರಿಣಯಂ | ,, | 0 | 10 | 0 |
| ಕುಣಿಗಲ್ ರಾಮಶಾಸ್ತ್ರಿಗಳ ಚರಿತ್ರೆ | ,, | | 4 | 0 |
| ಜೀರ್ಣ ವಿಜಯನಗರಾದರ್ಶ | ,, | 0 | 6 | 0 |
| ಶಾಂತೀಶ್ವರ ಪುರಾಣ | (2nd Language) | 1 | 12 | 0 |
| ಜೈಮಿನಿ ಭಾರತ | ,, | 1 | 8 | 0 |
| ಕೊಹಿನೂರು | ,, | 0 | 14 | 0 |
| ವಿಜ್ಞಾನೋಪನ್ಯಾಸಗಳು ವಾಸದ ಮನೆ | ,, | 0 | 12 | 0 |
| ಅರ್ಥಸಾಧನೆ ,, | ,, | 0 | 8 | 0 |
| ಶಬ್ದಮಣಿದರ್ಪಣ (ಹೊಸ ಮುದ್ರಣ) | | 2 | 8 | 0 |
| ಆಂಗ್ಲೇಯ ಚರಿತ್ರ ಸಂಗ್ರಹ | | 0 | 12 | 0 |
| ಹೊಸ ಭೂವಿ[illegible] ಭಾಗ [illegible] | | 0 | 7 | 0 |
| ಭಾಗ II ,, | | 0 | 15 | 0 |

ಇವುಗಳಲ್ಲದೆ ಅಪ್ಪರ್ ಸೆಕೆಂಡರಿ ತರಗತಿಗೆ ಬೇಕಾದ ಎಲ್ಲಾ ಪುಸ್ತಕಗಳೂ ನಮ್ಮಲ್ಲಿ ದೊರೆಯುತ್ತವೆ. ಕ್ರಯದಪಟ್ಟಿ ಉಚಿತ.

**ಎಂ. ಎಸ್. ರಾವ್ ಕಂಪೆನಿ,**

ಪುಸ್ತಕ ವ್ಯಾಪಾರಿಗಳು,

ಅವೆನ್ಯೂರೋಡ್, ಬೆಂಗಳೂರು ಸಿಟಿ.

ಬಿ. ಎಸ್. ಅಯ್ಯಂಗಾರ್, ಪ್ರಿಂಟರ್, ಬಿ. ಸಿಟಿ.